ಈಡೇರಿಸುವಂತೆ ಕಾರ್ಯಯೋಜನೆ ಕೈಗೊಳ್ಳಲಾಗುವುದು ಹಾಗೂ ಈ ನೀತಿಯ ಅವಧಿಯಲ್ಲಿ ಗಣನೀಯ ಫಲಿತಾಂಶ ಹೊಂದಲು ಪ್ರಯತ್ನಿಸಲಾಗುವುದು.

5.7.3 ಸರಕಾರದ ಇಲಾಖೆಗಳು ಮತ್ತು ಸಾರ್ವಜನಿಕ ಉದ್ಯಮಗಳು ತಮ್ಮ ಆವಶ್ಯಕ ವಸ್ತುಗಳನ್ನು ಖರೀದಿಸುವಾಗ ರಾಜ್ಯದಲ್ಲಿರುವ ಅತಿಸಣ್ಣ, ಸಣ್ಣ ಮಧ್ಯಮ ಘಟಕಗಳು ಉತ್ಪಾದಿಸುವ ವಸ್ತುಗಳಿಗೆ 15% ಆದ್ಯತಾ ಖರೀದಿ ಬೆಲೆ ನೀಡಲು ಅನುಮತಿ ನೀಡಲಾಗುವುದು.

5.7.4 ಹಿಂದುಳಿದ ಪ್ರದೇಶಗಳಲ್ಲಿರುವ ಕೈಗಾರಿಕೆಗಳು ಪೈಪೋಟಿಯಲ್ಲಿ ಮೇಲುಗೈ ಸಾಧಿಸಲು ಸಮರ್ಥವಾಗುವಂತೆ ಆವಶ್ಯಕ ಮತ್ತು ಆಕರ್ಷಕ ಉತ್ತೇಜನಗಳನ್ನು ಮತ್ತು ಸವಲತ್ತುಗಳನ್ನು ಒದಗಿಸಲಾಗುವುದು. ಗಡಿನಾಡು ಪ್ರದೇಶದಲ್ಲಿ ಕೈಗಾರಿಕೆಯ ತೀವ್ರ ಬೆಳವಣಿಗೆಗೆ ಒತ್ತಾಸೆ ನೀಡಲಾಗುವುದು ಗಡಿಪ್ರದೇಶದ ತಾಲೂಕುಗಳಲ್ಲಿ ಹೆಚ್ಚಿನ ಮೂಲಭೂತ ಸೌಕರ್ಯ ಒದಗಿಸಿ ಆಕರ್ಷಕ ಹೆಚ್ಚುವರಿ ಉತ್ತೇಜಕಗಳನ್ನು ನೀಡುವುದರ ಮೂಲಕ ನೆರೆರಾಜ್ಯದವರು ಇಲ್ಲಿ ಕೈಗಾರಿಕೆ ಸ್ಥಾಪಿಸುವ ಅವಕಾಶವನ್ನು ಹೆಚ್ಚಿಸಲಾಗುವುದು.

5.7.5 ರಾಜ್ಯ ಮತ್ತು ಜಿಲ್ಲಾ ಮಟ್ಟದಲ್ಲಿ ಎಂಎಸ್‌ಎಂ ಘಟಕಗಳ ಉತ್ಪನ್ನಗಳ ಅಭಿವೃದ್ಧಿ ಮತ್ತು ಮಾರಾಟಕ್ಕೆ ಅನುಕೂಲವಾಗುವಂತೆ ಪ್ರದರ್ಶನ ಕೇಂದ್ರಗಳನ್ನು ಸ್ಥಾಪಿಸಲಾಗುವುದು.

5.7.6 ಸ್ಥಳೀಯ ಸಂಪನ್ಮೂಲಗಳ ಮತ್ತು ಕೌಶಲ್ಯಗಳ ಸದುಪಯೋಗಕ್ಕಾಗಿ ಸಮೂಹ ಕೈಗಾರಿಕೆಗಳನ್ನು ಉತ್ತೇಜಿಸಲಾಗುವುದು. ಪ್ರಸಕ್ತ ಸ್ಥಳದ ಸುತ್ತಮುತ್ತ ಲಭ್ಯವಿರುವ ಸಂಪನ್ಮೂಲಗಳ ಮತ್ತು ಸ್ಪರ್ಧಾತ್ಮಕ ಪ್ರಯೋಜನವುಳ್ಳ ಉದ್ಯಮಗಳ ಸಮಗ್ರ ಅಧ್ಯಯನ ಮತ್ತು ವಿಶ್ಲೇಷಣೆ ಮಾಡಲಾಗುವುದು. ಈ ರೀತಿಯಾಗಿ ಸೂಕ್ತ ಗುಂಪುಗಳನ್ನು ಗುರುತಿಸಿ, ಅವುಗಳಿಗೆ ಪೂರಕವಾದ ತಾಲೂಕು / ಜಿಲ್ಲೆ / ಪ್ರದೇಶಗಳನ್ನು ಗುರುತಿಸಲಾಗುವುದು. ಹೀಗೆ ಗುರುತಿಸಿದ ಬಳಿಕ ಪ್ರತಿಯೊಂದು ಗುಂಪಿಗೂ / ಪ್ರದೇಶಕ್ಕೂ ಕಾರ್ಯಯೋಜನೆ ರೂಪಿಸಿ, ಪುರೋಗಾಮೀ ದೃಷ್ಟಿಯುಳ್ಳ ಸಮರ್ಪಕ ಕಾರ್ಯನೀತಿ, ರಿಯಾಯತಿ ಮತ್ತು ಪ್ರವರ್ತಕ ಕ್ರಮಗಳನ್ನು ಕೈಗೊಳ್ಳಲಾಗುವುದು. ಈ ಉದ್ದೇಶಕ್ಕಾಗಿ ಕೆ ಸಿ ಟಿ ಯು ಸಂಸ್ಥೆಯನ್ನು ನಿಯೋಜಿತ ಸಂಸ್ಥೆಯಾಗಿ ಮಾಡಲಾಗುವುದು.

5.7.7 ಸರಕಾರವು ಖಾದಿ ಮತ್ತು ಗ್ರಾಮೋದ್ಯೋಗ ಕ್ಷೇತ್ರದ ಮಹತ್ವವನ್ನು ಮನಗಂಡು ಈ ಕ್ಷೇತ್ರದ ಬೆಳವಣಿಗೆಗೆ ವಿಶೇಷ ಕಾರ್ಯಯೋಜನೆ ರೂಪಿಸಲಿದೆ.

5.7.8 ಕಾರ್ಮಿಕರ ಉತ್ಪಾದಕತೆಯ ಇಳುವರಿ ಸುಧಾರಣೆ ಉತ್ತಮ ಉತ್ಪಾದನೆಗೆ ಮೂಲಾಧಾರವಾಗಿದ್ದು ಇದನ್ನು ಹೆಚ್ಚಿಸುವ ಕ್ರಮಗಳಿಗೆ ಹೆಚ್ಚಿನ ಒತ್ತಾಸೆ ನೀಡಲಾಗುವುದು. ವ್ಯಾವಹಾರಿಕ ವೆಚ್ಚವನ್ನು ಕಡಿತಗೊಳಿಸಲು ಅನುಕೂಲವಾಗುವಂತೆ ಕಾನೂನು ವಿಧಿವಿಧಾನಗಳನ್ನು ಸರಳಗೊಳಿಸಲಾಗುವುದು.

5.7.9 ಕೆಐಎಡಿಬಿ ಯು ಕೈಗಾರಿಕಾ ಪ್ರದೇಶ ಅಭಿವೃದ್ಧಿಗೊಳಿಸುವಾಗ ಕನಿಷ್ಠ 20% ರಷ್ಟು ಪ್ರದೇಶವನ್ನು ಎಂಎಸ್‌ಎಂ ಕೈಗಾರಿಕೆಗಳಿಗೆ ಮೀಸಲಿರಿಸಲಾಗುವುದು. ಈ ಮೀಸಲು ಪ್ರದೇಶವನ್ನು ಹಂಚಿಕೆ ಮಾಡುವಾಗ ಸ್ಥಳೀಯ ಉದ್ಯಮಿಗಳಿಗೆ, ಸಮಾಜದ ಅಲಕ್ಷಿತ ವರ್ಗದ ಉದ್ಯಮಿಗಳಿಗೆ ಆದ್ಯತೆ ಮೇರೆಗೆ ನೀಡಲಾಗುವುದು. ಪಟ್ಟಣ ಪ್ರದೇಶಗಳಲ್ಲಿರುವ ಕೈಗಾರಿಕೆಗಳನ್ನು ನಗರದ ಹೊರ ಪ್ರದೇಶಕ್ಕೆ ಸ್ಥಳಾಂತರಿಸಲು ಪ್ರೋತ್ಸಾಹಿಸಲಾಗುವುದು.

5.7.10 ಕೇಂದ್ರ ಸರಕಾರದ ಸಂಬಂಧಪಟ್ಟ ನೆರವಿನ ಯೋಜನೆಗಳಾದ ASIDE, CGTFS, CLCSS, ಎಂಎಸ್‌ಎಂಇ ಗಳಿಗೆ ಸಮೂಹ ಅಭಿವೃದ್ಧಿ ಹಾಗೂ ವಿವಿಧ ಸಚಿವಾಲಯಗಳ ಹಲವಾರು ಯೋಜನೆಗಳನ್ನು ಉದ್ಯಮಿಗಳ ಪ್ರಯೋಜನಕ್ಕಾಗಿ ಬಳಸಿಕೊಳ್ಳಲಾಗುವುದು. ಈ ಯೋಜನೆಗಳ ಅತ್ಯಧಿಕ ಪ್ರಯೋಜನವನ್ನು ಉದ್ಯಮಿಗಳು ಪಡೆಯುವಂತೆ ಪೂರಕ ಕ್ರಮಗಳನ್ನು ರಾಜ್ಯ ಸರಕಾರವು ಕೈಗೊಳ್ಳುವುದು. ಈ ಯೊಜನೆಗಳ ಸಮರ್ಪಕ ಸಂಯೋಜನೆ ಮತ್ತು ಬಳಕೆಯ ಉಸ್ತುವಾರಿಗಾಗಿ ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯಲ್ಲಿ ಪ್ರತ್ಯೇಕ ವಿಭಾಗವನ್ನು ತೆರೆಯಲಾಗುವುದು.

5.7.11 ಉದ್ಯಮಿಗಳಿಗೆ ಅಥವಾ ಕೈಕಸುಬುದಾರರಿಗೆ ಸೇವೆ ಒದಗಿಸುವ ಸಂಘ ಸಂಸ್ಥೆಗಳ ಪಾತ್ರ ಮತ್ತು ಹೊಣೆಗಾರಿಕೆಗಳನ್ನು ಬದಲಾದ ಸನ್ನಿವೇಶಕ್ಕೆ ಅನುಗುಣವಾಗಿ ಮರು ನಿರೂಪಿಸಲಾಗುವುದು.

5.7.12 ಜಾಗತಿಕ ಆರ್ಥಿಕ ಕ್ಷೇತ್ರದ ಹಿಂಜರಿತದ ಪರಿಣಾಮವಾಗಿ ಹಲವಾರು ಉದ್ಯಮಗಳು, ಅದರಲ್ಲು ಎಂಎಸ್‌ಎಂ ಕ್ಷೇತ್ರದ ಉದ್ಯಮಗಳು ಗಂಭೀರವಾದ ದುಷ್ಪರಿಣಾಮಗಳನ್ನು ಅನುಭವಿಸುತ್ತಿವೆ. ಪುನಾರಚನೆಯ ಮೂಲಕ ಕೆಲವು ಘಟಕಗಳು ಚೇತರಿಸಿಕೊಂಡಿವೆಯಾದರೂ ಹಲವಾರು ಇನ್ನೂ ಸಂಕಷ್ಟದಲ್ಲಿವೆ, ಇನ್ನು ಕೆಲವು ನಿರ್ನಾಮವಾಗಿವೆ. ಸೂಕ್ತ ಪರಿಹಾರ ಪ್ಯಾಕೇಜ್ ರೂಪಿಸಿ ಲಾಭದಾಯಕ ಉದ್ಯಮಗಳ ಪುನಶ್ಚೇತನ ಹಾಗೂ ಪುನಶ್ಚೇತನ ಸಾಧ್ಯವಿಲ್ಲದ ಘಟಕಗಳ ಸುಸೂತ್ರ ನಿರ್ಗಮನಕ್ಕಾಗಿ ಕ್ರಮಕೈಗೊಳ್ಳಲಾಗುವುದು. ಈ ಪ್ರಕಾರ ಪ್ರತ್ಯೇಕವಾದ ಯೋಜನೆಯೊಂದನ್ನು ಎಲ್ಲಾ ಭಾಗಿದಾರರ ಜೊತೆ ಚರ್ಚಿಸಿ ರೂಪಿಸಲಾಗುವುದು.

**5.8 ಉತ್ಪಾದನಾ ಕ್ಷೇತ್ರದ ಬಲವರ್ಧನೆ**

5.8.1. ಆರ್ಥಿಕ ಬೆಳವಣಿಗೆ ಮತ್ತು ಸಂಪತ್ತಿನ ಹೆಚ್ಚಳಕ್ಕೆ ಉತ್ಪಾದನಾಕ್ಷೇತ್ರವು ಪ್ರಮುಖ ಪಾತ್ರ ವಹಿಸುತ್ತದೆ ಎಂಬುದು ನಿರ್ವಿವಾದ ವಿಚಾರ. ಈಕ್ಷೇತ್ರದ ಸದೃಢ ಬೆಳವಣಿಗೆ ಸರ್ವತೋಮುಖ ಅಭಿವೃದ್ಧಿ ಮತ್ತು ಉದ್ಯೋಗಾವಕಾಶಗಳ ನಿರ್ಮಾಣಕ್ಕೆ ಅತ್ಯಗತ್ಯ. ನವೀನತೆ ಮತ್ತು ಸ್ಪರ್ಧಾಶಕ್ತಿ ಈ ಕ್ಷೇತ್ರದ ತೀವ್ರ ಬೆಳವಣಿಗೆಗೆ ಪ್ರಮುಖ ಸಾಧನಗಳಾಗಿವೆ.

5.8.2. ಕೇಂದ್ರ ಸರಕಾರವು ಘೋಷಿಸಿರುವ ರಾಷ್ಟ್ರೀಯ ಉತ್ಪಾದನಾ ಧೋರಣೆಗೆ ಅನುಗುಣವಾಗಿ ಉತ್ಪಾದನಾಕ್ಷೇತ್ರದ ಬಲ ಹೆಚ್ಚಳಕ್ಕಾಗಿ ರಾಜ್ಯ ಸರಕಾರವು ವೆಚ್ಚದ ಪ್ರಮುಖ ಬಾಬತ್ತುಗಳಾದ ತೆರಿಗೆ, ನಿವೇಶನ ಲಭ್ಯತೆ, ಮೊದಲಾದ ಮೂಲಭೂತ ಸೌಕರ್ಯ, ಕಾರ್ಮಿಕ/ಪರಿಸರ ಸಂಬಂಧಿ ಕಾನೂನಿನ ನಿಯಮಗಳ ಪಾಲನೆಗಳ ಬಗ್ಗೆ ಹೆಚ್ಚಿನ ಗಮನ ನೀಡಿ ವ್ಯಾವಹಾರಿಕ ವೆಚ್ಚವನ್ನು ಕಡಿಮೆಗೊಳಿಸಲು ನೆರವು ನೀಡುವುದು.

5.8.3. ನ್ಯಾಷನಲ್ ಮ್ಯಾನುಫ್ಯಾಕ್ಚರಿಂಗ್ ಕಾಂಪಿಟೇಟಿವ್‌ನೆಸ್ ಪ್ರೋಗ್ರಾಂದಲ್ಲಿ ಸೂಚಿತವಾದ ಮಾರ್ಗದರ್ಶಿ ಸೂತ್ರಗಳ ಅನ್ವಯ ಉತ್ಪಾದನಾ ಕ್ಷೇತ್ರದ ಬೆಳವಣಿಗೆಗೆ ಅಗತ್ಯವಾದ ಬಂಡವಾಳ ಹೂಡಿಕೆಗೆ ಪೋಷಕವಾದ ವಾತಾವರಣ ನಿರ್ಮಿಸುವುದು.

**5.9 ರಫ್ತು ವಲಯದ ವರ್ಧನೆ**

5.9.1 ಮೂಲರೂಪದ ವಸ್ತುಗಳು, ತಯಾರಾದ ವಸ್ತುಗಳು ಹಾಗೂ ಸೇವೆಗಳ ರಫ್ತಿನ ಹೆಚ್ಚಳಕ್ಕಾಗಿ ರಾಜ್ಯ ಸರಕಾರವು ಹಲವಾರು ಕ್ರಮಗಳನ್ನು ಹಮ್ಮಿಕೊಂಡಿದೆ. ರಫ್ತು ಪ್ರಮಾಣವನ್ನು ಬಹು ಪಾಲು ಹೆಚ್ಚಿಸಲು ರಾಜ್ಯವು ಶಕ್ತವಾಗಿದೆ. ಪ್ರಸಕ್ತ ನೀತಿಯ ಕಾರ್ಯಾವಧಿಯು ಕೊನೆಗೊಳ್ಳುವ ವೇಳೆಗೆ ರಫ್ತು ಪರಿಮಾಣವನ್ನು ದ್ವಿಗುಣ ಗೊಳಿಸುವ ಗುರಿ ಇಟ್ಟುಕೊಳ್ಳಲಾಗಿದೆ.

5.9.2 ಕರ್ನಾಟಕ ರಫ್ತು ಪ್ರವರ್ಧಕ ಕೇಂದ್ರವಾದ ವಿಶ್ವೇಶ್ವರಯ್ಯ ಕೈಗಾರಿಕೆ ಮತ್ತು ವ್ಯಾಪಾರ ಕೇಂದ್ರ (ವಿಐಟಿಸಿ)ವು ರಫ್ತು ವ್ಯವಹಾರಕ್ಕೆ ಬೇಕಾದ ಮಾರುಕಟ್ಟೆ ಮಾಹಿತಿ ಜ್ಞಾನ, ರಫ್ತು ದಾಖಲಾತಿಗಳು, ಹಣಕಾಸು ಮತ್ತಿತರ ಆವಶ್ಯಕ ಸೌಲಭ್ಯಗಳನ್ನು ರಫ್ತುದಾರರಿಗೆ ಒದಗಿಸುತ್ತದೆ. ಸಾಗರೋತ್ತರ ಗ್ರಾಹಕರ ನಿರ್ದಿಷ್ಟ ಸಲಹೆ, ಸೂಚನೆಗಳನ್ನು ಪೂರೈಸಲು ಬೇಕಾದ ತಂತ್ರಜ್ಞಾನದ ಪರಿಷ್ಕಾರ ತಂತ್ರಜ್ಞಾನ ಮೂಲಗಳ ಆವಿಷ್ಕಾರಗಳಿಗಾಗಿ ಸೂಕ್ತ ಉತ್ತೇಜನಗಳನ್ನು ನೀಡಲಾಗುವುದು.

5.9.3 ವಿದೇಶೀ ಮಾರುಕಟ್ಟೆಗೆ ಕಡ್ಡಾಯವಾದ ಸಿ ಇ, ಸಿ ಸಿ ಸಿ ಮೊದಲಾದ ಪ್ರಮಾಣ ಪತ್ರಗಳನ್ನು ಪಡೆಯುವುದಕ್ಕಾಗಿ ರಫ್ತು ಆಧಾರಿತ ಉದ್ಯಮಗಳಿಗೆ ವಿಶೇಷ ಉತ್ತೇಜನಗಳನ್ನು ನೀಡಲಾಗುವುದು.

5.9.4 ಜಾಗತಿಕ ವಸ್ತು ಪ್ರದರ್ಶನ / ಔದ್ಯಮಿಕ ಮೇಳ ಗಳಲ್ಲಿ ಭಾಗವಹಿಸಲು ಉದ್ಯಮಿಗಳನ್ನು ಪ್ರೋತ್ಸಾಹಿಸಲಾಗುವುದು. ರಾಜ್ಯದ ಉದ್ಯಮಶೀಲರನ್ನು ಒಳಗೊಂಡ ವ್ಯಾಪಾರ ನಿಯೋಗಗಳ ಭೇಟಿಗಳನ್ನು ಕೇಂದ್ರ ಸರ್ಕಾರದ ಯೋಜನೆಯನ್ನು ಸಮನ್ವಯಗೊಳಿಸಿ ಉತ್ತೇಜಿಸಲಾಗುವುದು.

**5.10 ವಿರಳವಾದ ಸಂಪನ್ಮೂಲಗಳ ಸಂರಕ್ಷಣೆ**

5.10.1 ಸೂಕ್ತ ಕ್ರಮ ಕೈಗೊಳ್ಳುವುದರ ಮೂಲಕ ವಿರಳವಾದ ಸಂಪನ್ಮೂಲಗಳ ಮಿತವಾದ ಬಳಕೆಗೆ ಕೈಗಾರಿಕೆಗಳಿಗೆ ಉತ್ತೇಜನ ನೀಡಲಾಗುವುದು. ಸೂಕ್ತವಾದ ತಂತ್ರಜ್ಞಾನದ ಬಳಕೆಯಿಂದ ಜಲಸಂರಕ್ಷಣೆಗೆ ಒತ್ತು ನೀಡಲಾಗುವುದು.

5.10.2 ಕೈಗಾರಿಕೆಗಳಿಗೆ ನೀರು ಸರಬರಾಜು ಮಾಡುವ ಯೋಜನೆಗಳನ್ನು ತ್ವರಿತಗೊಳಿಸಲಾಗುವುದು. ಯೋಜನೆಯ ಲಾಭದಾಯಕತ್ವವನ್ನು ಹೆಚ್ಚಿಸಲು ಮತ್ತು ಉತ್ಪಾದನಾವೆಚ್ಚವನ್ನು ಮಿಗಿಸಲು ಬಳಸಿದ ನೀರಿನ ಮರುಬಳಕೆ ಮತ್ತು ನೀರನ್ನು ಲವಣರಹಿತವಾಗಿ ಮಾಡುವ ಸಾಧ್ಯತೆಯನ್ನು ಪರೀಕ್ಷಿಸಲಾಗುವುದು. ಸ್ಪೆಷಲ್ ಪರ್ಪಸ್ ವೆಹಿಕಲ್ ಮೂಲಕ ಕೈಗಾರಿಕೆಗಳಿಗೆ ನೀರನ್ನು ಒದಗಿಸುವ ಬೃಹತ್ ಯೋಜನೆಗಳನ್ನು ಕಾರ್ಯಗತಗೊಳಿಸಲಾಗುವುದು

5.10.3 ಬಳಸಿದ ನೀರಿನ ಮರುಬಳಕೆ ಮತ್ತು ತ್ಯಾಜ್ಯನೀರಿನ ಸಂಸ್ಕರಣೆ ಮಾಡಲು ಉದ್ಯಮಗಳಿಗೆ ಉತ್ತೇಜನ ನೀಡಲಾಗುವುದು.

5.10.4 ಅಸಂಪ್ರದಾಯಕ ಇಂಧನ ಮೂಲಗಳಾದ ಗಾಳಿ, ಸೌರಶಕ್ತಿ, ಜೈವಿಕ ವಸ್ತುಗಳನ್ನು ಬಳಸಿ ವಿದ್ಯುತ್ ಉತ್ಪಾದನೆಗೆ ಮತ್ತು ಬಳಕೆಗೆ ಪ್ರೋತ್ಸಾಹ ನೀಡಲಾಗುವುದು.

5.10.5 ಪರಿಸರ ಮಾಲಿನ್ಯವನ್ನು ತಡೆಗಟ್ಟಲು ಮತ್ತು ನಿಯಂತ್ರಿಸಲು ತ್ಯಾಜ್ಯ ವಸ್ತುಗಳ ನಿರ್ವಹಣೆಗೆ ನೂತನ ತಂತ್ರ ಜ್ಞಾನದ ಬಳಕೆಗೆ ಕೈಗಾರಿಕೆಗಳಿಗೆ ಪ್ರೋತ್ಸಾಹಿಸಲಾಗುವುದು.

5.10.6 ಕಾರ್ಬನ್ ಕ್ರೆಡಿಟ್ ರೇಟಿಂಗ್ ವಿಧಾನದಿಂದ ಆದಾಯದ ಹೆಚ್ಚಳವನ್ನು ಉತ್ತೇಜಿಸಲಾಗುವುದು. ಈ ಪ್ರಕ್ರಿಯೆಗೆ ಅಗತ್ಯವಾದ ತಾಂತ್ರಿಕ, ಆರ್ಥಿಕ ಮತ್ತು ಸಾಂಸ್ಥಿಕ ನೆರವನ್ನು ಒದಗಿಸಲು ಸೂಕ್ತ ನೋಡಲ್ ಸಂಸ್ಥೆಯನ್ನು ಗುರುತಿಸಲಾಗುವುದು.

5.10.7 ವಿರಳವಸ್ತುಗಳ ಸಂರಕ್ಷಣೆಗಾಗಿ ಇತರ ಇಲಾಖೆ/ಸಂಸ್ಥೆಗಳು ಕಾರ್ಯಗತ ಮಾಡುವ ಯೋಜನೆಗಳನ್ನು ಸಹ ಸಮರ್ಪಕವಾಗಿ ಅಳವಡಿಸಿಕೊಳ್ಳಲಾಗುವುದು

**5.11 ಉತ್ತಮ ಉತ್ಪಾದನಾ ವಿಧಾನಗಳಿಗೆ ಪುರಸ್ಕಾರ**

5.11.1 ಉದ್ಯಮಗಳು ತಮ್ಮ ಕಾರ್ಯಾಚರಣೆಗಳಲ್ಲಿ ಸ್ವಚ್ಛವಾದ ಉತ್ಪಾದನಾ ತಾಂತ್ರಿಕತೆಯ ಬಳಕೆಗೆ ಉತ್ತೇಜನ ನೀಡಲಾಗುವುದು. ಪ್ರಕೃತಿ ಮತ್ತು ಪರಿಸರ ಸಂರಕ್ಷಣೆಗಾಗಿ ಹಸಿರು ತಂತ್ರಜ್ಞಾನ ಮತ್ತು ಉತ್ಪಾದನಾ ವಿಧಾನಗಳನ್ನು ಅಳವಡಿಸಲು ಪ್ರಚೋದಿಸಲಾಗುವುದು. ಅತ್ಯುತ್ತಮ ಉತ್ಪಾದನಾ ವಿಧಾನವನ್ನು ಅಳವಡಿಸಿಕೊಳ್ಳುವ ಉದ್ಯಮಗಳಿಗೆ ಪ್ರತಿ ವರ್ಷ ರಾಜ್ಯಪ್ರಶಸ್ತಿ ನೀಡಿ ಗೌರವಿಸಲಾಗುವುದು.

5.11.2 ಬೃಹತ್ ಉದ್ಯಮಗಳು ತಮ್ಮ ಸಾಂಸ್ಥಿಕ ಸಾಮಾಜಿಕ ಜವಾಬ್ದಾರಿ ಪಾಲಿಸುವಂತೆ ಮನ ಒಲಿಸಲಾಗುವುದು. ಅವುಗಳನ್ನು ಸ್ಥಳೀಯರಿಗೆ ತರಬೇತಿ ನೀಡುವಂತೆ, ಲಭ್ಯವುಳ್ಳ ಕೌಶಲ್ಯವನ್ನು ಉತ್ತಮಗೊಳಿಸುವಂತೆ, ಸಮಾಪನಾ ಶಾಲೆಗಳನ್ನು ನಡೆಸುವಂತೆ ಒತ್ತಾಯಿಸಲಾಗುವುದು. ಹೂಡಿಕೆದಾರರು ಸಮಾಜ ನಿರ್ಮಾಣ ಕಾರ್ಯದಲ್ಲಿ ಹೆಚ್ಚಿನ ರೀತಿಯಲ್ಲಿ ಭಾಗವಹಿಸಲು ಪ್ರಚೋದಿಸಲಾಗುವುದು.

5.12 **ಸಾಧ್ಯತಾವಕಾಶವುಳ್ಳ ಕ್ಷೇತ್ರಗಳ ಉತ್ತೇಜನಕ್ಕಾಗಿ ಇತರ ನೀತಿ ಕ್ರಮಗಳು**

5.12.1 ಜವಳಿ ಮತ್ತು ಉಡುಪು ಕ್ಷೇತ್ರವು ವಿಶೇಷವಾಗಿ ಮಹಿಳೆಯರಿಗೆ ಹೆಚ್ಚಿನ ಉದ್ಯೋಗವನ್ನು ನೀಡುತ್ತಿದೆ. ಸರ್ಕಾರವು ನಾರಿನಿಂದ ಮೊದಲ್ಗೊಂಡು ಅಂತಿಮ ಉತ್ಪನ್ನಗಳ ಮೌಲ್ಯ ಸರಣಿಯಲ್ಲಿ ಕ್ರಮಬದ್ಧವಾದ, ಹೆಚ್ಚಿನ ಮತ್ತು ಸುಸ್ಥಿರವಾದ ಬೆಳವಣಿಗೆಯನ್ನು ಸಾಧಿಸಲು ಕಂಕಣಬದ್ಧವಾಗಿದೆ. ಇದು ಪ್ರಾದೇಶಿಕ ಅಭಿವೃದ್ಧಿಯಲ್ಲಿ ಸಮತೋಲನ ಸಾಧಿಸಲು ಅನುಕೂಲವಾಗಲಿದೆ. ಈ ಕ್ಷೇತ್ರಕ್ಕೆ ಹೆಚ್ಚಿನ ಬೆಂಬಲವನ್ನು ನೀಡಲು ಸರಕಾರವು ಪ್ರತ್ಯೇಕವಾದ ಸುವರ್ಣ ವಸ್ತ್ರ ನೀತಿ – 2008–2013 ಯನ್ನು ಈಗಾಗಲೇ ಪ್ರಕಟಿಸಿದೆ.

5.12.2 ಖನಿಜಗಳು ರಾಜ್ಯದ ಸಂಪತ್ತು ಎಂಬ ವಿಚಾರವನ್ನು ಮನಗಂಡ ಸರಕಾರವು ಖನಿಜ ಸಂಪತ್ತಿನ ವ್ಯವಸ್ಥಿತ ಮತ್ತು ಸುಸ್ಥಿರವಾದ ಬಳಕೆಗೆ ಒತ್ತಾಸೆ ನೀಡುತ್ತಿದೆ. ವೈಜ್ಞಾನಿಕ ಮತ್ತು ಸವಿವರವಾದ ಪ್ರಾಸ್ಪೆಕ್ಟಿಂಗ್ ಮೂಲಕ ಭೌಗೋಳಿಕ ಸಾಧ್ಯತಾವಕಾಶಗಳನ್ನು ಅಧಿಕಗೊಳಿಸುವ ಅಗತ್ಯವಿದೆ. ಖನಿಜ ಕ್ಷೇತ್ರದ ಕ್ರಮಬದ್ಧ ಅಭಿವೃದ್ಧಿಗೆ ಮಾರ್ಗದರ್ಶನ ನೀಡಲು ಸರಕಾರವು ಕರ್ನಾಟಕ ಖನಿಜ ನೀತಿ–2008 ನ್ನು ಪ್ರಕಟಿಸಿದೆ. ಈ ನೀತಿಯ ಅಂಶಗಳನ್ನು ಗಣಿ ಆಧರಿತ ಕೈಗಾರಿಕೆಗಳ ಕ್ಷಿಪ್ರ ಅಭಿವೃದ್ಧಿಗಾಗಿ ಸೂಕ್ತ ರೀತಿಯಲ್ಲಿ ಬಳಸಲಾಗುವುದು.

5.12.3 ರಾಜ್ಯವು ತನ್ನ ಕೃಷಿ ಪರಿಸರದಿಂದಾಗಿ ಕೃಷಿ ಆಹಾರ ಸಂಸ್ಕರಣಾ ಉದ್ಯಮಗಳನ್ನು ಆರಂಭಿಸಲು ಸೂಕ್ತವಾದ ಜಾಗವಾಗಿದೆ. ಈ ಕ್ಷೇತ್ರದ ಹೆಚ್ಚಿನ ಅಭಿವೃದ್ಧಿಗಾಗಿ ಅವಕಾಶವುಳ್ಳ ಜಾಗಗಳಲ್ಲಿ ಖಾಸಗಿ ಕ್ಷೇತ್ರದ ಸಹಭಾಗಿತ್ವದೊಂದಿಗೆ ಆಹಾರ ಪಾರ್ಕ್‌ಗಳನ್ನು ಸ್ಥಾಪಿಸಲಾಗುವುದು. ಕೇಂದ್ರ ಸರ್ಕಾರದ ಯೋಜನೆಯ ಲಾಭಪಡೆದು ರಾಜ್ಯದಲ್ಲಿ ಮೆಗಾ ಫುಡ್ ಪಾರ್ಕ್‌ಗಳನ್ನು ಸ್ಥಾಪಿಸಲಾಗುವುದು. ಕೃಷಿ ಆಹಾರ ಸಂಸ್ಕರಣಾ ಕ್ಷೇತ್ರದ ಅಭಿವೃದ್ಧಿಗೆ ಪ್ರತ್ಯೇಕ ನೀತಿಯೊಂದನ್ನು ರೂಪಿಸಲು ಉದ್ದೇಶಿಸಲಾಗಿದೆ.

5.12.4 ರಾಜ್ಯದಲ್ಲಿ ವಿಶೇಷವಾಗಿ ಉತ್ತರ ಕರ್ನಾಟಕದ ಜಿಲ್ಲೆಗಳಲ್ಲಿ ಸಕ್ಕರೆ ಕೈಗಾರಿಕೆಗಳು ಸಾಕಷ್ಟಿವೆ. ನೆರೆ ಹೊರೆಯ ರಾಜ್ಯಗಳ ಜೊತೆ ಸ್ಪರ್ಧಿಸಲು ಶಕ್ತವಾಗುವಂತೆ ಈ ಕ್ಷೇತ್ರಕ್ಕೆ ಹೆಚ್ಚಿನ ಬೆಂಬಲ ನೀಡಲಾಗುವುದು. ಕೋ–ಜನರೇಶನ್ ಸೌಕರ್ಯ ಮತ್ತು ಇಥನಾಲ್ ಉತ್ಪಾದಿಸುವ ಸಕ್ಕರೆ ಕಾರ್ಖಾನೆಗಳಿಗೆ ಸೂಕ್ತ ರೀತಿಯ ನೆರವು ನೀಡಲಾಗುವುದು. ಈ ಕ್ಷೇತ್ರದ ಅಭಿವೃದ್ಧಿಗಾಗಿ ರಾಜ್ಯವು ಪ್ರತ್ಯೇಕವಾದ ನೀತಿಯೊಂದನ್ನು ಹೊರತರಲಿದೆ.

**5.13 ಸೇವಾ ಸೌಲಭ್ಯಗಳ ಪೂರೈಕೆ**

5.13.1 ಕರ್ನಾಟಕ ಉದ್ಯೋಗ ಮಿತ್ರ (ಕೆಯುಎಮ್)ವನ್ನು ಸಬಲಗೊಳಿಸಿಹೂಡಿಕೆದರರಿಗೆ ಎಲ್ಲಾ ಸೇವಾ ಸೌಲಭ್ಯಗಳು ಒಂದೇ ಕಡೆ ದೊರೆಯುವಂತೆ ಮಾಡಲಾಗುವುದು. ಹೂಡಿಕೆದಾರರಿಗೆ ಅನುಮೋದನೆ ದೊರೆತ ಬಳಿಕ ಬೇಕಾದ ಎಲ್ಲಾ ನೆರವನ್ನು ಒದಗಿಸಿ ಉದ್ಯಮ ಸ್ಥಾಪನೆಯ ಪರಿಮಾಣ ಹೆಚ್ಚುವಂತೆ ನೋಡಿಕೊಳ್ಳಲಾಗುವುದು.

5.13.2 ಉದ್ಯಮಿಗಳಿಗೆ ಮತ್ತು ಹೂಡಿಕೆದರರಿಗೆ ಅಗತ್ಯವುಳ್ಳ ಮಾಹಿತಿಯನ್ನು ಒದಗಿಸಲು ಕಿಯೊಸ್ಕ್ ತೆರೆಯಲಾಗುವುದು. ವಿದೇಶೀ ಹೂಡಿಕೆದಾರರನ್ನು ಹೆಚ್ಚಾಗಿ ಆಕರ್ಷಿಸಲು ಕರ್ನಾಟಕ ಡಯೊಸ್ಪೋರ ಕೋಶವನ್ನು ಪರಿಣಾಮಕಾರಿಯಾಗಿ ಸುಧಾರಿಸಲಾಗುವುದು

5.13.3 ಏಕ ಗವಾಕ್ಷಿ ಅನುಮೋದನೆ ಪ್ರಕ್ರಿಯೆಯನ್ನು ಇನ್ನಷ್ಟು ಪರಿಣಾಮಕಾರಿಯನ್ನಾಗಿ ಮಾಡಿ ಹೆಚ್ಚಿನ ಅಂಗೀಕಾರ/ಅನುಮೋದನೆಗಳು ಎಸ್ ಎಚ್ ಎಲ್ ಸಿ ಸಿ/ ಎಸ್ ಎಲ್ ಎಸ್ ಡಬ್ಲ್ಯು ಸಿ ಸಿ/ಡಿ ಎಲ್ ಎಸ್ ಡಬ್ಲ್ಯು ಸಿ ಸಿ ಗಳ ಹಂತದಲ್ಲಿಯೇ ದೊರೆಯುವಂತೆ ಮಾಡಲಾಗುವುದು. ಕರ್ನಾಟಕ ಕೈಗಾರಿಕಾ (ಫೆಲಿಸಿಟೇಷನ್) ಆಕ್ಟ್ 2002 ನ ಸಂಬಂಧಿಸಿದ ನಿಯಮಗಳನ್ನು ಸಮರ್ಪಕವಾಗಿ ಬಳಸಿ ವ್ಯಾವಹಾರಿಕ ವೆಚ್ಚವನ್ನು ತಗ್ಗಿಸಿ, ವ್ಯವಹಾರವನ್ನು ಅನಾಯಾಸವಾಗಿ ಮಾಡುವ ಅವಕಾಶ ಮಾಡಿಕೊಡಲಾಗುವುದು. ಅಗತ್ಯವಿರುವ ಎಲ್ಲಾ ಅನುಮೋದನೆಗಳು ನಿಗದಿತ ಸಮಯವಾದ 45 ದಿನಗಳ ಓಳಗೆ ಲಭಿಸುವಂತೆ ಕ್ರಮ ತೆಗೆದುಕೊಳ್ಳಲಾಗುವುದು.

5.13.4 ಅತಿಸಣ್ಣ, ಸಣ್ಣ ಮತ್ತು ಮಧ್ಯಮ ಪ್ರಮಾಣದ ಉದ್ದಿಮೆಗಳ ಪ್ರಸ್ತಾಪಗಳನ್ನು ಜಿಲ್ಲಾ ಮಟ್ಟದ ಏಕ ಗವಾಕ್ಷಿ ಅನುಮೋದನಾ ಸಮಿತಿ (ಡಿಎಲ್ಎಸ್‌ಡಬ್ಲ್ಯುಸಿಸಿ) ನಿರ್ಧರಿಸುವುದು. ಈ ಸಂಬಂಧವಾಗಿ ಕರ್ನಾಟಕ ಕೈಗಾರಿಕಾ ಫೆಲಿಸಿಟೇಷನ್ ಕಾಯಿದೆಗೆ ಸೂಕ್ತ ತಿದ್ದುಪಡಿ ತರಲಾಗುವುದು.

5.13.5 ಹೂಡಿಕೆದಾರರಿಗೆ ಮಾರ್ಗದರ್ಶಿ/ ಮಾಹಿತಿ ಕೈಪಿಡಿ ಗಳನ್ನು ಒದಗಿಸಲಾಗುವುದಲ್ಲದೆ ಸಂಬಂಧಿಸಿದ ಎಲ್ಲಾ ಮಾಹಿತಿಗಳನ್ನು ವೆಬ್‌ಸೈಟ್/ ಅಂತರ್ಜಾಲ ಗಳಮೂಲಕ ಒದಗಿಸಲಾಗುವುದು.

5.13.6 (1) ಅಂತರಾಷ್ಟ್ರೀಯ, ರಾಷ್ಟ್ರೀಯ, ರಾಜ್ಯಮಟ್ಟದಲ್ಲಿ ಹೂಡಿಕೆದಾರರ ಸಮಾವೇಶ ಮತ್ತು ಪ್ರಗತಿ ಪ್ರದರ್ಶನ ಏರ್ಪಡಿಸಿ ರಾಜ್ಯಕ್ಕೆ ಬೃಹತ್ ಪ್ರಮಾಣದ ಬಂಡವಾಳ ಹರಿದು ಬರುವಂತೆ ಪ್ರಯತ್ನಿಸಲಾಗುವುದು.

5.13.6 (2) ಕೈಗರಿಕೋದ್ಯಮಿಗಳು ಕುಂದುಕೊರತೆಗಳನ್ನು ಬಗೆಹರಿಸಲು ನಿರಂತರವಾಗಿ ರಾಜ್ಯ/ ವಿಭಾಗಿಯ/ಜಿಲ್ಲಾಮಟ್ಟದ ಕೈಗಾರಿಕಾ ಅದಾಲತ್ ಗಳನ್ನು ನಡೆಸಲಾಗುವುದು.

5.13.7 ವಿವಿಧ ಇಲಾಖೆಗಳ ನಡುವೆ ಸಮನ್ವಯವನ್ನು ಪರಿಣಾಮಕಾರಿಯಾಗಿ ಬಲಗೊಳಿಸಿ ಉತ್ತಮಫಲಿತಾಂಶ ಪಡೆಯಲಾಗುವುದು. ಈಗಾಗಲೇ ಜಾರಿಯಲ್ಲಿರುವ / ಪ್ರಸ್ತಾಪಿಸಿರುವ ಕಾರ್ಯನೀತಿಗಳ ಅತ್ಯಧಿಕ ಪ್ರಯೋಜನ ಪಡೆಯಲು ಉದ್ದೇಶಿಸಲಾಗಿದೆ.

5.13.8 ಹಲವಾರು ಬೃಹತ್ ಯೋಜನೆಗಳನ್ನು ತ್ವರಿತಗತಿಯಲ್ಲಿ ಕಾರ್ಯಗತಮಾಡುವ ಪ್ರಯತ್ನ ನಡೆಯುತ್ತಿದ್ದು ಇದರ ಉಪಜನ್ಯ ಪ್ರಯೋಜನವನ್ನು ಸ್ಥಳೀಯ ಉದ್ಯಮಗಳು ಪಡೆಯಲಿವೆ.

5.13.9 ಸರಕಾರವು ರೂಪಿಸಿರುವ ವಿಷನ್ ಗ್ರೂಪ್ ಸಮಿತಿಯು ಕೈಗಾರಿಕೆ ಮತ್ತು ವಾಣಿಜ್ಯೋದ್ಯಮಗಳ ಬೆಳವಣಿಗೆಗೆ ಮಾರ್ಗದರ್ಶನ ಮಾಡಲಿದೆ. ಉದ್ದೇಶಿತ ಯೋಜನೆಗಳ ಅನುಷ್ಠಾನ ಮತ್ತು ಕಾರ್ಯಾಚರಣೆಗೆ ಅಡಚಣೆ ಉಂಟುಮಾಡುವ ವಿವಿಧ ವಿಚಾರಗಳನ್ನು ಪರಿಶಿಲಿಸಲು ಬ್ಯಾಂಕು ಮತ್ತಿತರ ಹಣಕಾಸು ಸಂಸ್ಥೆಗಳ ಜತೆ ಸಮಾಲೋಚನ ಸಭೆಗಳನ್ನು ಏರ್ಪಡಿಸಲಾಗುವುದು.

5.13.10 ಕೈಗಾರಿಕೆ ಮತ್ತು ವಾಣಿಜ್ಯ ವ್ಯವಹಾರಗಳ ಪ್ರತಿನಿಧಿಗಳನ್ನೊಳಗೊಂಡು ರಚಿತವಾಗಲಿರುವ ರಾಜ್ಯಮಟ್ಟದ ಕೈಗಾರಿಕಾಭಿವೃದ್ದಿ ಪರಿಷತ್ ಕೈಗಾರಿಕಾ ನೀತಿಯ ಅನುಷ್ಠಾನದ ಪ್ರಗತಿಯನ್ನು ಪರಿಶೀಲಿಸಲಿದೆ.

**5.14 ಉತ್ತೇಜನಗಳು ಮತ್ತು ರಿಯಾಯತಿಗಳು**

5.14.1 ಜಾಗತೀಕರಣಗೊಂಡ ಆರ್ಥಿಕತೆಯಲ್ಲಿ–ಉದ್ಯಮಿಗಳು ಸಮರ್ಥವಾಗಿ ತಮ್ಮ ಪಾತ್ರವನ್ನು ನಿರ್ವಹಿಸುವಂತೆ ಆಕರ್ಷಕವಾದ ಉತ್ತೇಜನ ಮತ್ತು ರಿಯಾಯತಿಗಳನ್ನು ರೂಪಿಸಿ ಕಾರ್ಯಗತಗೊಳಿಸಲು ರಾಜ್ಯ ಸರಕಾರವು ಬದ್ದವಾಗಿದೆ. ಉದ್ಯೋಗಾವಕಾಶಗಳ ನಿರ್ಮಾಣ ಮತ್ತು ಉತ್ಪಾದನಾ ಆಧಾರಿತ ಉತ್ತೇಜನಗಳ ಮೂಲಕ ಅಪೇಕ್ಷಿತ ಫಲಿತಾಂಶವನ್ನು ಪಡೆಯಲು ಪ್ರಯತ್ನಿಸಲಾಗುವುದು.

5.14.2 ಎಸ್ ಹೆಚ್ ಎಲ್ ಸಿ ಸಿ ಯ ಶಿಫಾರಸ್ಸಿನ ಮೇರೆಗೆ ಮೆಗಾ ಯೋಜನೆಗಳಿಗೆ ಅವುಗಳಿಂದ ರಾಜ್ಯಕ್ಕೆ ಲಭಿಸುವ ಅನುಕೂಲತೆ ಮತ್ತು ಅಂತಹ ಯೋಜನೆಗಳ ವಿಶೇಷತೆಯ ಆಧಾರದಲ್ಲಿ ಪ್ಯಾಕೇಜ್ ಪ್ರಕಾರ ಲಭ್ಯವಿರುವ ಉತ್ತೇಜನಕ್ಕೆ ಹೆಚ್ಚುವರಿಯಾಗಿ ವಿಶೇಷ ಉತ್ತೇಜನಗಳನ್ನು ನೀಡಲಾಗುವುದು.

5.14.3 ಉತ್ತೇಜನ ಮತ್ತು ರಿಯಾಯತಿಗಳನ್ನು ಸಮರ್ಪಕ ರೀತಿಯಲ್ಲಿ ಅನುಷ್ಠಾನಗೊಳಿಸಲು ರಾಜ್ಯದ ವರ್ಗೀಕೃತ ತಾಲೂಕುಗಳ ಪಟ್ಟಿಯನ್ನು **ಅನುಬಂಧ – ೧** ತೋರಿಸಿರುವಂತೆ ನಾಲ್ಕು ವಲಯಗಳನ್ನಾಗಿ ವರ್ಗೀಕರಿಸಲಾಗುವುದು.

5.14.4 ಬಂಡವಾಳ ಹೂಡಿಕೆ ಮೇಲೆ ನೀಡಲಾಗುವ ಉತ್ತೇಜನ ಮತ್ತು ರಿಯಾಯತಿಗಳನ್ನು **ಅನುಬಂದ–2** ರಲ್ಲಿ ನೀಡಲಾಗಿದೆ.

5.14.5 ಉತ್ತೇಜನಗಳಿಗೆ ಅರ್ಹವಿರುವ ಸೇವಾ ಕ್ಷೇತ್ರದ ಚಟುವಟಿಕೆಗಳ ಪಟ್ಟಿಯನ್ನು **ಅನುಬಂಧ–3** ರಲ್ಲಿ ನೀಡಲಾಗಿದೆ.

5.14.6 ಉತ್ತೇಜನಗಳಿಗೆ ಅನರ್ಹವಾಗಿರುವ ಚಟುವಟಿಕೆಗಳ ಪಟ್ಟಿಯನ್ನು **ಅನುಬಂಧ-4** ರಲ್ಲಿ ನೀಡಲಾಗಿದೆ.

5.14.7 ಉತ್ತೇಜನ ಮತ್ತು ರಿಯಾಯಿತಿಗಳನ್ನು ಮಂಜೂರು ಮಾಡಲು ಪಾಲಿಸಬೇಕಾದ ಷರತ್ತು ಮತ್ತು ನಿಯಮಗಳನ್ನು **ಅನುಬಂಧ-5** ರಲ್ಲಿ ನೀಡಲಾಗಿದೆ.

**5.15 ಅನುಷ್ಠಾನದ ಪರಿಶೀಲನೆ**

5.15.1 ಕೈಗಾರಿಕಾ ನೀತಿಯಲ್ಲಿ ಇರಿಸಿಕೊಂಡಿರುವ ಗುರಿಗಳನ್ನು ನಿಗದಿತ ಕಾಲದಲ್ಲಿ ಸಾಧಿಸಲು ಈ ಕೆಳಗಿನ ವರ್ಷವಾರು ಪ್ರಗತಿಯ ಮೈಲುಗಲ್ಲುಗಳನ್ನು ನಿಗದಿಪಡಿಸಲಾಗಿದೆ.

| ವರ್ಷಾಂತ್ಯದಲ್ಲಿ | ಸೃಷ್ಟಿಯಾಗಲಿರುವ ಹೆಚ್ಚಿನ ಉದ್ಯೋಗಾವಕಾಶ (ಲಕ್ಷ ಸಂಖ್ಯೆಗಳು) | ಹೂಡಿಕೆಯಾಗಲಿರುವ ಹೆಚ್ಚಿನ ಬಂಡವಾಳ (ಕೋಟಿ ರೂ.ಗಳಲ್ಲಿ) |
|---|---|---|
| 2009-10 | 1.00 | 30,000 |
| 2010-11 | 3.00 | 90,000 |
| 2011-12 | 5.00 | 1,65,000 |
| 2012013 | 7.50 | 2,40,000 |
| 2013-14 | 10.00 | 3,00,000 |

5.15.2 ಈ ಕೈಗಾರಿಕಾ ನೀತಿಗೆ ಸಂಬಂಧಿಸಿದ ಎಲ್ಲ ಕ್ರಮಗಳ ಅನುಷ್ಠಾನದ ಪ್ರಗತಿಯನ್ನು ಪರಿಶೀಲಿಸಲು ರಾಜ್ಯ ಮಟ್ಟದಲ್ಲಿ ಅಂತರ್ ವಿಭಾಗೀಯ ಉನ್ನತ ಸಮಿತಿಯನ್ನು ರಚಿಸಲಾಗುವುದು. ಈ ಸಮಿತಿಯು ಈ ಕೈಗಾರಿಕಾ ನೀತಿಗೆ ಸಂಬಂಧಿಸಿದ ಎಲ್ಲ ಆದೇಶಗಳನ್ನು ಸಂಬಂಧಪಟ್ಟ ಇಲಾಖೆಗಳು ಕಾಲ ವಿಳಂಬವಿಲ್ಲದೆ ಜಾರಿಗೊಳಿಸುವುದನ್ನು ಖಚಿತಪಡಿಸುವುದು. ಅಲ್ಲದೆ, ಈ ಸಮಿತಿಯು ಕೈಗಾರಿಕಾನೀತಿಯ ಪರಿಣಾಮಕಾರಿ ಅನುಷ್ಠಾನಕ್ಕೆ ಅಗತ್ಯವಾದ ಮಧ್ಯಾವಧಿ ತಿದ್ದುಪಡಿಗಳನ್ನು ಶಿಫಾರಸು ಮಾಡುವುದು. ಈ ಕೈಗಾರಿಕಾ ನೀತಿಯ ಅನುಷ್ಠಾನದ ಪ್ರಗತಿಯ ಬಗೆಗೆ ವಾರ್ಷಿಕ ವರದಿಯನ್ನು ಈ ಸಮಿತಿಯು ಪ್ರಕಟಿಸಲಿದೆ.

**ಅನುಬಂಧ – 1**

**ಉತ್ತೇಜನ ಮತ್ತು ರಿಯಾಯತಿಗಳನ್ನು ನೀಡಲು ತಾಲೂಕುಗಳ ವಲಯವಾರು ವರ್ಗೀಕರಣ**

| ಕ್ರಮ ಸಂಖ್ಯೆ | ಜಿಲ್ಲೆ | ಒಟ್ಟು ತಾಲ್ಲೂಕುಗಳ ಸಂಖ್ಯೆ | ವಲಯ-1 ಅತ್ಯಂತ ಹಿಂದುಳಿದ ತಾಲ್ಲೂಕುಗಳು | ವಲಯ-2 ಅತಿ ಹಿಂದುಳಿದ ತಾಲ್ಲೂಕುಗಳು | ವಲಯ-3 ಹಿಂದುಳಿದ ತಾಲ್ಲೂಕುಗಳು | ವಲಯ-4 ಕೈಗಾರಿಕೆಯಲ್ಲಿ ಮುಂದರಿದ ತಾಲ್ಲೂಕುಗಳು |
|---|---|---|---|---|---|---|
| 1. | ಬೆಂಗಳೂರು ನಗರ | 4 | | | | ಆನೇಕಲ್, ಬೆಂಗಳೂರು ಉತ್ತರ ಬೆಂಗಳೂರು (ದಕ್ಷಿಣ) ಬೆಂಗಳೂರು (ಪೂರ್ವ) |
| 2. | ಬೆಂಗಳೂರು ಗ್ರಾಮಾಂತರ | 4 | | | | ದೇವನಹಳ್ಳಿ ದೊಡ್ಡಬಳ್ಳಾಪುರ ಹೊಸಕೋಟೆ ನೆಲಮಂಗಲ |
| 3 | ರಾಮನಗರ | 4 | ಕನಕಪುರ, ಮಾಗಡಿ | | | ರಾಮನಗರ ಚನ್ನಪಟ್ಟಣ |
| 4 | ಚಿತ್ರದುರ್ಗ | 6 | ಹೊಸದುರ್ಗ | ಹಿರಿಯೂರು, ಮೊಳಕಾಲ್ಮೂರು ಹೊಳಲಕೆರೆ ಚಳ್ಳಕೆರೆ | ಚಿತ್ರದುರ್ಗ | |
| 5 | ದಾವಣಗೆರೆ | 6 | ಚೆನ್ನಗಿರಿ ಹರಪನಹಳ್ಳಿ | ಹೊನ್ನಾಳಿ ಜಗಳೂರು | ದಾವಣಗೆರೆ ಹರಿಹರ | |

| ಕ್ರಮ ಸಂಖ್ಯೆ | ಜಿಲ್ಲೆ | ಒಟ್ಟು ತಾಲ್ಲೂಕುಗಳ ಸಂಖ್ಯೆ | ವಲಯ–1 ಅತ್ಯಂತ ಹಿಂದುಳಿದ ತಾಲ್ಲೂಕುಗಳು | ವಲಯ–2 ಅತಿ ಹಿಂದುಳಿದ ತಾಲ್ಲೂಕುಗಳು | ವಲಯ–3 ಹಿಂದುಳಿದ ತಾಲ್ಲೂಕುಗಳು | ವಲಯ–4 ಕೈಗಾರಿಕೆಯಲ್ಲಿ ಮುಂದರಿದ ತಾಲ್ಲೂಕುಗಳು |
|---|---|---|---|---|---|---|
| 6 | ಚಿಕ್ಕಬಳ್ಳಾಪುರ | 6 | ಬಾಗೇಪಲ್ಲಿ | ಗುಡಿಬಂಡೆ<br>ಗೌರಿಬಿದನೂರು | ಚಿಕ್ಕಬಳ್ಳಾಪುರ<br>ಶಿಡ್ಲಘಟ್ಟ<br>ಚಿಂತಾಮಣಿ | |
| 7 | ಕೋಲಾರ | 5 | | ಮುಳಬಾಗಿಲು | ಕೋಲಾರ<br>ಬಂಗಾರಪೇಟೆ<br>ಶ್ರೀನಿವಾಸಪುರ<br>ಮಾಲೂರು | |
| 8 | ಶಿವಮೊಗ್ಗ | 7 | | ಸೊರಬ | ಶಿವಮೊಗ್ಗ<br>ಭದ್ರಾವತಿ<br>ಸಾಗರ<br>ಶಿಕಾರಿಪುರ<br>ಹೊಸನಗರ<br>ತೀರ್ಥಹಳ್ಳಿ | |
| 9 | ತುಮಕೂರು | 10 | ಕುಣಿಗಲ್<br>ಮಧುಗಿರಿ<br>ಗುಬ್ಬಿ, ಶಿರಾ,<br>ಪಾವಗಡ | ತುರುವೇಕೆರೆ<br>ಕೊರಟಗೆರೆ<br>ಚಿಕ್ಕನಾಯಕನಹಳ್ಳಿ | ತುಮಕೂರು<br>ತಿಪಟೂರು | |
| 10 | ಚಾಮರಾಜ ನಗರ | 4 | ಚಾಮರಾಜ – ನಗರ | ಗುಂಡ್ಲುಪೇಟೆ<br>ಕೊಳ್ಳೆಗಾಲ | ಯೆಳಂದೂರು | |
| 11 | ಚಿಕ್ಕ ಮಗಳೂರು | 7 | | ಕಡೂರು | ಚಿಕ್ಕಮಗಳೂರು<br>ತರಿಕೆರೆ<br>ಶೃಂಗೇರಿ<br>ಮೂಡಿಗೆರೆ<br>ಕೊಪ್ಪ,<br>ಎನ್ ಆರ್ ಪುರ | |
| 12 | ದಕ್ಷಿಣಕನ್ನಡ | 5 | | | ಬಂಟ್ವಾಳ<br>ಮಂಗಳೂರು (ಕಾರ್ಪೊರೇಷನ್ ಪರಿಮಿತಿ ಹೊರತಾಗಿ)<br>ಪುತ್ತೂರು<br>ಸುಳ್ಯ<br>ಬೆಳ್ತಂಗಡಿ | ಮಂಗಳೂರು (ಕಾರ್ಪೊರೇಷನ್ ಪರಿಮಿತಿ) |
| 13 | ಹಾಸನ | 8 | | ಅರಕಲಗೂಡು | ಹಾಸನ<br>ಅರಸಿಕೆರೆ<br>ಚೆನ್ನರಾಯ ಪಟ್ಟಣ,<br>ಹೊಳೆನರಸಿಪುರ<br>ಬೇಲೂರು<br>ಆಲೂರು<br>ಸಕಲೇಶಪುರ | |

| ಕ್ರಮ ಸಂಖ್ಯೆ | ಜಿಲ್ಲೆ | ಒಟ್ಟು ತಾಲ್ಲೂಕುಗಳ ಸಂಖ್ಯೆ | ವಲಯ–1 ಅತ್ಯಂತ ಹಿಂದುಳಿದ ತಾಲ್ಲೂಕುಗಳು | ವಲಯ–2 ಅತಿ ಹಿಂದುಳಿದ ತಾಲ್ಲೂಕುಗಳು | ವಲಯ–3 ಹಿಂದುಳಿದ ತಾಲ್ಲೂಕುಗಳು | ವಲಯ–4 ಕೈಗಾರಿಕೆಯಲ್ಲಿ ಮುಂದರಿದ ತಾಲ್ಲೂಕುಗಳು |
|---|---|---|---|---|---|---|
| 14 | ಕೊಡಗು | 3 | | | ಮಡಿಕೇರಿ<br>ಸೋಮವಾರ–<br>ಪೇಟೆ,<br>ವಿರಾಜಪೇಟೆ | |
| 15 | ಮಂಡ್ಯ | 7 | | ಮಳವಳ್ಳಿ,<br>ನಾಗಮಂಗಲ<br>ಕೆ ಆರ್ ಪೇಟೆ | ಮಂಡ್ಯ<br>ಮದ್ದೂರು<br>ಶ್ರೀರಂಗಪಟ್ಟಣ<br>ಪಾಂಡವಪುರ | |
| 16 | ಮೈಸೂರು | 7 | ಹೆಗ್ಗಡ<br>ದೇವನಕೋಟೆ | ಹುಣಸೂರು<br>ಟಿ.ನರಸೀಪುರ<br>ನಂಜನಗೂಡು | ಪೆರಿಯಾಪಟ್ಟಣ<br>ಮೈಸೂರು<br>(ಕಾರ್ಪೊರೇಷ<br>ನ್ ಪರಿಮಿತಿ<br>ಹೊರತಾಗಿ)<br>ಕೃಷ್ಣರಾಜನಗರ | ಮೈಸೂರು,<br>(ಕಾರ್ಪೊರೇಷನ್<br>ಪರಿಮಿತಿ) |
| 17 | ಉಡುಪಿ | 3 | | | ಉಡುಪಿ<br>ಕುಂದಾಪುರ<br>ಕಾರ್ಕಳ | |
| | **ಉತ್ತರ ಕರ್ನಾಟಕ ಪ್ರದೇಶ** | | | | | |
| 18 | ಬಳ್ಳಾರಿ | 7 | ಸಂಡೂರು,<br>ಕೂಡ್ಲಿಗಿ | ಸಿರಗುಪ್ಪ<br>ಹಗರಿಬೊಮ್ಮನ–<br>ಹಳ್ಳಿ, ಹಡಗಲಿ | ಬಳ್ಳಾರಿ<br>ಹೊಸಪೇಟೆ | |
| 19 | ಬೀದರ್ | 5 | ಭಾಲ್ಕಿ,<br>ಹುಮ್ನಾಬಾದ್<br>ಬಸವಕಲ್ಯಾಣ<br>ಔರಾದ್ | | ಬೀದರ್ | |
| 20 | ಗುಲ್ಬರ್ಗ | 10 | ಸೇಡಂ<br>ಶೋರಾಪುರ<br>ಯಾದ್ಗಿರ್<br>ಚಿತಾಪುರ್<br>ಅಫ್ಜಲ್ ಪುರ<br>ಶಾಹಪುರ್<br>ಅಳಂದ್<br>ಚಿಂಚೋಳಿ<br>ಜೇವರ್ಗಿ | | ಗುಲ್ಬರ್ಗ | |
| 21 | ಕೊಪ್ಪಳ | 4 | ಕುಷ್ಟಗಿ<br>ಯೆಲ್ಬುರ್ಗ | ಕೊಪ್ಪಳ | ಗಂಗಾವತಿ | |
| 22 | ರಾಯಚೂರು | 5 | ಸಿಂಧನೂರು<br>ಮಾನ್ವಿ<br>ಲಿಂಗಸುಗೂರು<br>ದೇವದುರ್ಗ | ರಾಯಚೂರು | | |
| 23 | ಬಾಗಲಕೋಟೆ | 6 | ಬಿಳಗಿ | ಹುನಗುಂದ್<br>ಬಾದಾಮಿ | ಬಾಗಲಕೋಟೆ<br>ಮುಧೋಳ<br>ಜಮಖಂಡಿ | |

| ಕ್ರಮ ಸಂಖ್ಯೆ | ಜಿಲ್ಲೆ | ಒಟ್ಟು ತಾಲ್ಲೂಕುಗಳ ಸಂಖ್ಯೆ | ವಲಯ–1 ಅತ್ಯಂತ ಹಿಂದುಳಿದ ತಾಲ್ಲೂಕುಗಳು | ವಲಯ–2 ಅತಿ ಹಿಂದುಳಿದ ತಾಲ್ಲೂಕುಗಳು | ವಲಯ–3 ಹಿಂದುಳಿದ ತಾಲ್ಲೂಕುಗಳು | ವಲಯ–4 ಕೈಗಾರಿಕೆಯಲ್ಲಿ ಮುಂದರಿದ ತಾಲ್ಲೂಕುಗಳು |
|---|---|---|---|---|---|---|
| 24 | ಬೆಳಗಾವಿ | 10 | | ಅಥಣಿ<br>ಗೋಕಾಕ<br>ಸವದತ್ತಿ | ಬೆಳಗಾವಿ<br>ಖಾನಾಪುರ<br>ಹುಕ್ಕೇರಿ<br>ರಾಮದುರ್ಗ<br>ಬೈಲಹೊಂಗಲ<br>ಚಿಕ್ಕೋಡಿ<br>ರಾಯಬಾಗ್ | |
| 25 | ಬಿಜಾಪುರ | 5 | ಮುದ್ದೆಬಿಹಾಳ<br>ಬಸವನ–<br>ಬಾಗೇವಾಡಿ,<br>ಇಂಡಿ, ಸಿಂದಗಿ | | ಬಿಜಾಪುರ | |
| 26 | ಧಾರವಾಡ | 5 | | ಕಲಘಟಗಿ | ಧಾರವಾಡ<br>ಹುಬ್ಬಳ್ಳಿ<br>ಕುಂದಗೋಳ<br>ನವಲಗುಂದ | |
| 27 | ಗದಗ | 5 | | ಮುಂಡರಗಿ | ಗದಗ<br>ನರಗುಂದ<br>ರೋಣ,<br>ಶಿರಹಟ್ಟಿ | |
| 28 | ಹಾವೇರಿ | 7 | | ಸವಣೂರು<br>ಶಿಗ್ಗಾಂ<br>ಹಿರೆಕರೂರು | ಹಾವೇರಿ,<br>ರಾಣೆಬೆನ್ನೂರು<br>ಬ್ಯಾಡಗಿ<br>ಹಾನಗಲ್ | |
| 29 | ಉತ್ತರಕನ್ನಡ | 11 | | ಸೂಪಾ, ಭಟ್ಕಳ | ಕಾರವಾರ<br>ಹಳಿಯಾಳ<br>ಶಿರಸಿ<br>ಮುಂಡಗೋಡು<br>ಯೆಲ್ಲಾಪುರ<br>ಹೊನ್ನಾವರ<br>ಅಂಕೋಲ<br>ಸಿದ್ದಾಪುರ<br>ಕುಮಟಾ | |
| | **ಒಟ್ಟು** | **176** | **39** | **40** | **85** | **12** |

**ಅನುಬಂಧ – 2**

**ಬಂಡವಾಳ ಹೂಡಿಕೆಗೆ ನೀಡಲಾಗುವ ಉತ್ತೇಜನಗಳು ಮತ್ತು ರಿಯಾಯಿತಿಗಳು**

**1 ಬಂಡವಾಳ ಹೂಡಿಕೆ ಉತ್ತೇಜನಾ ಸಹಾಯಧನ**

**ಎ) ಅತಿ ಸಣ್ಣ ಉತ್ಪಾದನಾ ಘಟಕಗಳಿಗೆ**

ವಲಯ – 1 : ವಿಎಫ್ಎ ನ 25% (ಗರಿಷ್ಠ 10 ಲಕ್ಷ ರೂ.ಗಳು)

ವಲಯ – 2 : ವಿಎಫ್ಎ ನ 20% (ಗರಿಷ್ಠ 7.5 ಲಕ್ಷ ರೂ.ಗಳು)

ವಲಯ – 3 : ವಿಎಫ್ಎ ನ 15% (ಗರಿಷ್ಠ 5.0 ಲಕ್ಷ ರೂ.ಗಳು)

ವಲಯ – 4 : ಏನೂ ಇಲ್ಲ

**ಬ) ಸಣ್ಣ ಉತ್ಪಾದನಾ ಘಟಕಗಳಿಗೆ**

ವಲಯ – 1 : ವಿಎಫ್ಎ ನ 20% (ಗರಿಷ್ಠ 20ಲಕ್ಷ ರೂ.ಗಳು)

ವಲಯ – 2 : ವಿಎಫ್ಎ ನ 15% (ಗರಿಷ್ಠ 15 ಲಕ್ಷ ರೂ.ಗಳು)

ವಲಯ – 3 : ವಿಎಫ್ಎ ನ 10% (ಗರಿಷ್ಠ 10 ಲಕ್ಷ ರೂ.ಗಳು)

ವಲಯ – 4 : ಏನೂ ಇಲ್ಲ

**ಸಿ) ಮಧ್ಯಮ ಪ್ರಮಾಣದ ಉತ್ಪಾದನಾ ಘಟಕಗಳಿಗೆ (ಕನಿಷ್ಠ 25 ಜನರನ್ನು ನೇಮಕ ಮಾಡಿರುವಂತಹ)**

ವಲಯ – 1 : 30 ಲಕ್ಷ ರೂಪಾಯಿಗಳು

ವಲಯ – 2 : 20 ಲಕ್ಷ ರೂಪಾಯಿಗಳು

ವಲಯ – 3 : ಏನೂ ಇಲ್ಲ

ವಲಯ – 4 : ಏನೂ ಇಲ್ಲ

**ಟಿಪ್ಪಣಿ :** ವಿಎಫ್ಎ ಅಂದರೆ – ಸ್ಥಿರಾಸ್ತಿ ಮೌಲ್ಯ

ಸೂಚನೆ:

(i) ಮಂಜೂರಾತಿಯಾದ ಸಹಾಯಧನದ 25% ರಷ್ಟನ್ನು ಪ್ರತಿ ವರ್ಷ ಘಟಕಗಳು ಪಾವತಿ ಮಾಡಿದ ಗ್ರಾಸ್ ವಾಟ್, ಇಎಸ್ಐ ಮತ್ತು ಇಪಿಎಫ್ ಮೊತ್ತ ಮತ್ತು ವಿದ್ಯುತ್ತಿಗಾಗಿ ಖರ್ಚುಮಾಡಿದ ಮೊತ್ತಕ್ಕೆ ಮರು ಪಾವತಿಯಾಗಿ ನೀಡಲಾಗುವುದು.

ವಿದ್ಯುತ್ ಉಪಯೋಗಿಸದ, ವಾಟ್, ಇಪಿಎಫ್, ಇಎಸ್ಐ ವ್ಯಾಪ್ತಿಗೆ ಒಳಪಡದ ಘಟಕಗಳಿಗೆ ಅವುಗಳ ಸಾಲದ ಬಾಕಿಯನ್ನು ನೀಡುವ ಸಲುವಾಗಿ ನೀಡಲಾಗುವುದು.

(ii) ಉತ್ತೇಜನವು ಘಟಕದ ಸ್ಥಿರ ಸ್ವತ್ತಿನ ಮೌಲ್ಯದ 50% ರಷ್ಟು ಅವಧಿಸಾಲ ಪಡೆದ ಉದ್ಯಮಗಳಿಗೆ ಮಾತ್ರ ಲಭ್ಯವಿರುವುದು.

(iii) ಮಂಜೂರಾದ ಸಹಾಯಧನವನ್ನು ಘಟಕಗಳು 5 ವರ್ಷಗಳ ಒಳಗಾಗಿ ಪಡೆಯಬೇಕು.

1.1 ಪರಿಶಿಷ್ಟ ಜಾತಿ/ಪಂಗಡಗಳ / ಮಹಿಳೆಯರು / ಅಂಗವಿಕಲರು/ ನಿವೃತ್ತ ಯೋಧರು ಮತ್ತು ಹೈದರಾಬಾದ್ ಕರ್ನಾಟಕದ ಅತಿಹಿಂದುಳಿದ ತಾಲ್ಲೂಕುಗಳಲ್ಲಿ ಬರುವ ಘಟಕಗಳಿಗೆ ಹೆಚ್ಚುವರಿ ಹೂಡಿಕೆ ಸಹಾಯಧನ.

5% ರಷ್ಟು, ಆದರೆ ಗರಿಷ್ಠ ಪ್ರಮಾಣ ಅತಿ ಸಣ್ಣ, ಸಣ್ಣ, ಮಧ್ಯಮ ಪ್ರಮಾಣದ ಉತ್ಪಾದನಾ ಘಟಕಗಳಿಗೆ ಅನುಕ್ರಮವಾಗಿ 1.00 ಲಕ್ಷ, 3.00 ಲಕ್ಷ ಹಾಗೂ 5.00ಲಕ್ಷ ರೂಪಾಯಿಗಳಷ್ಟು ಹೆಚ್ಚುವರಿ ಸಹಾಯದನಕ್ಕೆ ಅರ್ಹವಾಗಿವೆ.

**2 ಮುದ್ರಾಂಕ ಶುಲ್ಕದ ವಿನಾಯತಿ** :

**ಎಮ್ ಎಸ್ ಎಂ ಇ, ಬೃಹತ್ ಮತ್ತು ಮೆಗಾ ಯೋಜನೆಗಳಿಗೆ :**

ಅವಧಿ ಸಾಲ ಪಡೆಯಲು – (ಅ) ರಾಜ್ಯ ಸರಕಾರ ಮತ್ತು / ಅಥವಾ ರಾಜ್ಯ ಹಣಕಾಸು ಸಂಸ್ಥೆ, ರಾಜ್ಯ ಕೈಗಾರಿಕಾ ಬಂಡವಾಳ ಹೂಡಿಕೆ ಮತ್ತು ಅಭಿವೃದ್ಧಿ ನಿಗಮ, ರಾಷ್ಟ್ರ ಮಟ್ಟದ ಹಣಕಾಸು ಸಂಸ್ಥೆಗಳು, ವಾಣಿಜ್ಯ ಬ್ಯಾಂಕುಗಳು, ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು, ಸಹಕಾರಿ ಬ್ಯಾಂಕುಗಳು, ಖಾದಿ ಮತ್ತು ಗ್ರಾಮೋದ್ಯೋಗ ಮಂಡಳಿ, ಖಾದಿ ಮತ್ತು ಗ್ರಾಮೋದ್ಯೋಗ ಕಮಿಷನ್, ಕರ್ನಾಟಕ ಪರಿಶಿಷ್ಟ ಜಾತಿ /ಪಂಗಡಗಳ ಅಭಿವೃದ್ಧಿ ನಿಗಮ, ಕರ್ನಾಟಕ ರಾಜ್ಯ ಅಲ್ಪ ಸಂಖ್ಯಾತರ ಅಭಿವೃದ್ಧಿ ನಿಗಮ ಮತ್ತು ಸರಕಾರದಿಂದ ಅನುಸೂಚಿತವಾದ ಮತ್ತಿತರ ಸಂಸ್ಥೆಗಳೊಡನೆ ಮಾಡಿಕೊಂಡಿರುವ ಸಾಲಕರಾರು, ಕ್ರೆಡಿಟ್ ಡೀಡ್, ಅಡಮಾನ / ಬಾಡಿಗೆ ಪತ್ರಗಳಿಗೆ ಮೊದಲ ಐದು ವರ್ಷಗಳಿಗೆ ಮಾತ್ರ – (ಆ) ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ, ಕರ್ನಾಟಕ ಸಣ್ಣ ಕೈಗಾರಿಕಾಭಿವೃದ್ಧಿ ನಿಗಮ, ಕರ್ನಾಟಕ ವಿದ್ಯುನ್ಮಾನ ಅಭಿವೃದ್ಧಿ ನಿಗಮ, ಕರ್ನಾಟಕ ಕೈಗಾರಿಕಾ ಬಂಡವಾಳ ಹೂಡಿಕೆ ಮತ್ತು ಅಭಿವೃದ್ಧಿ ನಿಗಮ, ಕೈಗಾರಿಕಾ ಸಹಕಾರ ಸಂಸ್ಥೆಗಳು ಮತ್ತು ಅಂಗೀಕೃತ ಖಾಸಗಿ ಕೈಗಾರಿಕಾ ವಸಾಹತುಗಳ ಜತೆ ಕೈಗಾರಿಕಾ ನಿವೇಶನ, ಷೆಡ್ಡುಗಳು, ಕೈಗಾರಿಕಾ ಕಟ್ಟಡಗಳನ್ನು ಪಡೆಯಲು, ಉದ್ಯಮಗಳು ಮಾಡಿಕೊಂಡ ಬಾಡಿಗೆ ಕರಾರು, ಬಾಡಿಗೆ–ಹಾಗೂ–ಕ್ರಯ ಪತ್ರ, ಅಧಿಕೃತ ಕ್ರಯಪತ್ರ ಮೊದಲಾದ ದಸ್ತಾವೇಜಗಳಿಗೆ ಮುದ್ರಾಂಕ ಶುಲ್ಕ ವಿನಾಯಿತಿ ಈ ಕೆಳಗಿನಂತೆ ದೊರೆಯುತ್ತದೆ.

ವಲಯ 1 : 100%

ವಲಯ 2 : 100%

ವಲಯ 3 : 75%

ವಲಯ 4 : –

**3 ನೋಂದಣಿ ಶುಲ್ಕದಲ್ಲಿ ರಿಯಾಯಿತಿ :**

**ಎಮ್ ಎಸ್ ಎಂ ಇ, ಬೃಹತ್ ಮತ್ತು ಮೆಗಾ ಯೋಜನೆಗಳಿಗೆ:**

ಮೇಲಿನ ಪ್ಯಾರಾ –2 ರಲ್ಲಿ ಸೂಚಿಸಲಾದ ಎಲ್ಲಾ ದಸ್ತಾವೇಜುಗಳಿಗೆ 1000 ರೂ.ಗಳ ಮೌಲ್ಯಕ್ಕೆ ಒಂದು ರೂಪಾಯಿಯಂತೆ ರಿಯಾಯತಿ ನೋಂದಣೆ ಶುಲ್ಕ ವಿಧಿಸಲಾಗುವುದು.

ಸೂಚನೆ :

1 ಮೇಲಿನ ಮುದ್ರಾಂಕ ಶುಲ್ಕವು ಕೆಎಲ್ಆರ್ ಆಕ್ಟ್ ನ ಸೆಕ್ಷನ್ 109 ರ ನಿಯಮದ ಪ್ರಕಾರ ಖರೀದಿಸುವ ಜಮೀನಿಗೆ ಮತ್ತು SHLCC/SLSWCC/DLSWCC ಗಳಿಂದ ಅನುಮೋದಿತವಾದ ಉದ್ಯಮಗಳು ಕೈಗಾರಿಕೋದ್ದೇಶಗಳಿಗೆ ಪರಿವರ್ತಿತವಾದ ಜಮೀನನ್ನು ಖರೀದಿಸಲು ಸಹ ಅನ್ವಯವಾಗುತ್ತವೆ.

2 ಮೇಲೆ ಸೂಚಿಸಲಾದ ಮುದ್ರಾಂಕ ಶುಲ್ಕ ವಿನಾಯಿತಿ ಮತ್ತು ರಿಯಾಯತಿ ದರದ ನೋಂದಣಿ ಶುಲ್ಕವು ಕೈಗಾರಿಕಾ ನಿವೇಶನ, ಷೆಡ್ಡುಗಳು, ಕೈಗಾರಿಕಾ ಕಟ್ಟಡಗಳು, ಮೊದಲಾದುವುಗಳ ಲೀಸ್–ಕಮ್–ಸೇಲ್ ಕರಾರಿನ ಅವಧಿ ಮುಗಿದ ಬಳಿಕ ಮಾಡಿಕೊಳ್ಳಲಾಗುವ ಅಂತಿಮ ಕ್ರಯ ಪತ್ರಕ್ಕೂ ಅನ್ವಯವಾಗುತ್ತದೆ. ಈ ಹಿಂದೆ ಲೀಸ್–ಕಮ್–ಸೇಲ್ ಮಾಡಿ ಕೊಂಡಾಗ ಚಾಲ್ತಿಯಲ್ಲಿದ್ದ, ಕೈಗಾರಿಕಾ ನೀತಿಯ ಪ್ರಕಾರ ಕ್ರಯಪತ್ರದ ಮೊತ್ತವನ್ನು ನಿರ್ಧರಿಸಲಾಗುವುದು.

**4 ಭೂ ಪರಿವರ್ತನಾ ಶುಲ್ಕದ ಮಾಫಿ :**

**ಎಮ್ ಎಸ್ ಎಂ ಇ, ಬೃಹತ್ ಮತ್ತು ಮೆಗಾ ಯೋಜನೆಗಳಿಗೆ**

ಕೃಷಿ ಭೂಮಿಯನ್ನು ಕೈಗಾರಿಕೋದ್ದೇಶಕ್ಕಾಗಿ ಪರಿವರ್ತಿಸಿದಾಗ ಪರಿವರ್ತನಾ ಶುಲ್ಕವನ್ನು ಈ ಕೆಳಗೆ ಕಾಣಿಸಿದಂತೆ ಮಾಡಲಾಗುವುದು. ಈ ಉತ್ತೇಜನವನ್ನು ಖಾಸಗಿ ವಲಯದವರು ಕೈಗಾರಿಕಾ ಪ್ರದೇಶ / ವಸಾಹತು ಅಭಿವೃದ್ಧಿಗಾಗಿ ಪರಿವರ್ತಿಸಿದಾಗ ಕೂಡಾ ನೀಡಲಾಗುವುದು.

| | | | |
|---|---|---|---|
| ವಲಯ | 1 | : | 100% |
| ವಲಯ | 2 | : | 100% |
| ವಲಯ | 3 | : | 75% |
| ವಲಯ | 4 | : | – |

ಸೂಚನೆ : ಪರಿವರ್ತನಾ ಶುಲ್ಕವನ್ನು ಯೋಜನೆಯು ಕಾರ್ಯಗತವಾದ ಬಳಿಕ ಮರು ಪಾವತಿ ಮಾಡಲಾಗುವುದು.

**5 ಪ್ರವೇಶ ತೆರಿಗೆ ವಿನಾಯಿತಿ**

**ಎಮ್ ಎಸ್ ಎಂ ಇ, ಬೃಹತ್ ಮತ್ತು ಮೆಗಾ ಯೋಜನೆಗಳಿಗೆ**

ವಲಯ 1, 2 ಮತ್ತು 3 : ಅಂಗೀಕೃತ ಯೋಜನೆಯು ಕಾರ್ಯಗತವಾಗಲು ಪ್ರಾರಂಭವಾದಂದಿನಿಂದ ಮೂರು ವರ್ಷಗಳ ಕಾಲ ಸ್ಥಿರ ಸ್ವತ್ತುಗಳು, ಯಂತ್ರಸ್ಥಾವರಗಳ ಮೇಲೆ 100% ಪ್ರವೇಶ ತೆರಿಗೆ ಪಾವತಿಯಿಂದ ವಿನಾಯಿತಿ ನೀಡಲಾಗುವುದು. ಈ ವಿನಾಯ್ತಿಗೆ ವಿದ್ಯುತ್ ಉತ್ಪಾದನೆ ಯೋಜನೆಗಳು ತನ್ನ ಸ್ವಂತ ಬಳಕೆಗಾಗಿ ಅಳವಡಿಸಿ ಕೊಳ್ಳುವ ಯಂತ್ರಸ್ಥಾವರ, ಇದಕ್ಕೆ ಸಂಬಂಧಿಸಿದ ಸ್ಥಿರ ಸ್ವತ್ತುಗಳು ಉಪಕರಣಗಳೂ ಸೇರಿರುತ್ತದೆ.

ಈ ಪ್ರವೇಶ ತೆರಿಗೆ ವಿನಾಯಿಯು ಪ್ರಾರಂಭದ ಐದು ವರ್ಷಗಳಲ್ಲಿ ಉದ್ಯಮವು ಖರೀದಿಸುವ ಕಚ್ಚಾ ವಸ್ತುಗಳು, ಬಿಡಿಭಾಗಗಳು, ಉಪಕರಣಗಳು, ಉತ್ಪಾದನಾ ಕಾರ್ಯಸಾಧನಗಳು, ಪೆಟ್ರೋಲಿಯಂ ಉತ್ಪನ್ನದಿಂದ ಹೊರತಾದ ಬಳಕೆಯ ವಸ್ತುಗಳಿಗೂ ದೊರೆಯುತ್ತದೆ.

ವಲಯ –4 : ಲಭ್ಯವಿಲ್ಲ.

**6 ರಫ್ತು ಉದ್ದೇಶಿತ ಉದ್ಯಮಗಳಿಗೆ ಉತ್ತೇಜನಗಳು**

**ಎಮ್ ಎಸ್ ಎಂ ಇ, ಬೃಹತ್ ಮತ್ತು ಮೆಗಾ ಯೋಜನೆಗಳಿಗೆ**

(i) ಪ್ರವೇಶ ತೆರಿಗೆ ಪಾವತಿಯಿಂದ ವಿನಾಯಿತಿ :

ಯಾವುದೇ ವಲಯದಲ್ಲಿ 100% ರಫ್ತು ಉದ್ದೇಶಿತ ಉದ್ಯಮಿಗಳು ಕಾರ್ಯಗತವಾಗಲು ಪ್ರಾರಂಭವಾದಂದಿನಿಂದ ಮೂರು ವರ್ಷಗಳವರೆಗೆ ಯಂತ್ರಸ್ಥಾವರ ಮತ್ತು ಸ್ಥಿರ ಸ್ವತ್ತುಗಳನ್ನು ತರಿಸಿಕೊಳ್ಳಲು ಪ್ರವೇಶ ತೆರಿಗೆಯಿಂದ 100% ವಿನಾಯಿತಿ ದೊರೆಯುತ್ತದೆ.

ತಮ್ಮ ಒಟ್ಟು ಉತ್ಪನ್ನದ 25% ರಷ್ಟು ರಫ್ತು ಬಾಧ್ಯತೆಯಿರುವ ವಲಯ 1,2 ಮತ್ತು 3 ರಲ್ಲಿರುವ ರಫ್ತು ಉದ್ದೇಶಿತ ಉದ್ಯಮಗಳಿಗೆ ಮೊದಲ ಮೂರು ವರ್ಷ ಉದ್ಯಮವು ಖರೀದಿಸುವ ಕಚ್ಚಾ ವಸ್ತುಗಳು, ಬಿಡಿಭಾಗಗಳು, ಉಪಕರಣಗಳು, ಉತ್ಪಾದನಾ ಕಾರ್ಯಸಾಧನಗಳು, ಪೆಟ್ರೋಲಿಯಂ ಉತ್ಪನ್ನದಿಂದ ಹೊರತಾದ ಬಳಕೆಯ ವಸ್ತುಗಳಿಗೂ (ಅವುಗಳ ರಫ್ತು ಪ್ರಮಾಣವನ್ನು ಆಧರಿಸಿ) 100% ಪ್ರವೇಶ ತೆರಿಗೆ ವಿನಾಯಿತಿ ದೊರೆಯುವುದು. ವಲಯ–4 ರಲ್ಲಿರುವ ಉದ್ಯಮಗಳಿಗೆ ಈ ವಿನಾಯಿತಿಯು 50%ಕ್ಕೆ ಸೀಮಿತವಾಗಿದೆ.

(ii) ಪ್ರಮಾಣ ಪತ್ರಗಳಿಗೆ ತಗಲಿದ ವೆಚ್ಚದ ಮರುಪಾವತಿ

ಎಲ್ಲಾ ನಾಲ್ಕು ವಲಯಗಳಲ್ಲಿರುವ 100% ರಫ್ತು ಮತ್ತು ಇತರ ಉದ್ದೇಶಿತ ಉದ್ಯಮಗಳಿಗೆ CE, CCC ಮತ್ತಿತರ ಕಡ್ಡಾಯ ಪ್ರಮಾಣ ಪತ್ರ ಪಡೆಯಲು ಖರ್ಚು ಮಾಡಿದ ಹಣದ ಶೇ.50%, ಆದರೆ ಗರಿಷ್ಠ 2.00 ಲಕ್ಷ ರೂಪಾಯಿಗಳಿಗೆ ಮೀರದಷ್ಟು ಹಣವನ್ನು ಮರುಪಾವತಿ ಮಾಡಲಾಗುವುದು.

**7 ಕೃಷಿ ಉತ್ಪನ್ನ ಮಾರುಕಟ್ಟೆ ತೆರಿಗೆಯಿಂದ ವಿನಾಯ್ತಿ**

**ಎಮ್ ಎಸ್ ಎಂ ಇ, ಬೃಹತ್ ಮತ್ತು ಮೆಗಾ ಯೋಜನೆಗಳಿಗೆ**

ವಲಯ 1, 2, 3 ರಲ್ಲಿರುವ ಕೃಷಿ ಉತ್ಪನ್ನವನ್ನು ಸಂಸ್ಕರಿಸುವ ಹೊಸ ಉದ್ಯಮಗಳು ಹಾಗೂ ಹಾಲಿ ಉದ್ಯಮಗಳು ರೈತರಿಂದ ನೇರವಾಗಿ ಕೃಷಿ ಉತ್ಪನ್ನಗಳನ್ನು [ಕರ್ನಾಟಕ APM (Regulation & Development), ಕಾಯಿದೆ 1966 ರ ಶೆಡ್ಯೂಲ್ (1980ರ ಕಾಯಿದೆ ಸಂ. 17 ರ ಪ್ರಕಾರ 30.06.1979 ರ ನಂತರ ಜಾರಿಗೆ ಬರುವಂತೆ ಸೇರಿಸಲಾದ) ಕ್ರಮ ಸಂ. II, III, IV, VI, VII, IX & X ರಲ್ಲಿ ನಮೂದಿಸಲ್ಪಟ್ಟ] ತಮ್ಮ ಕೈಗಾರಿಕೆಗಳಲ್ಲಿ ಸಂಸ್ಕರಿಸಲು ಕೊಂಡು ಕೊಳ್ಳುವಾಗ, ಕ್ರಮವಾಗಿ 5 ವರ್ಷ, 4 ವರ್ಷ, 3 ವರ್ಷಗಳ ಅವಧಿಯಲ್ಲಿ APMC ಸೆಸ್/ ಶುಲ್ಕ ನೀಡುವುದರಿಂದ ವಿನಾಯಿತಿ ದೊರೆಯುವುದು.

ವಲಯ – 4 : ಲಭ್ಯವಿಲ್ಲ.

**8 ತ್ಯಾಜ್ಯ ಸಂಸ್ಕರಣ ಯಂತ್ರ ಸ್ಥಾಪನೆಗೆ ಸಹಾಯಧನ**

**ಎಮ್ ಎಸ್ ಎಂ ಇ, ಬೃಹತ್, ಮೆಗಾ ಮತ್ತು ಅಲ್ಟ್ರಾ ಮೆಗಾ ಯೋಜನೆಗಳಿಗೆ**

ವಲಯ 1,2 ಮತ್ತು 3 ರಲ್ಲಿ ಪ್ರಾರಂಭವಾಗುವ ಉತ್ಪಾದನಾ ಉದ್ಯಮಗಳಿಗೆ ತ್ಯಾಜ್ಯ ವಸ್ತುಗಳ ಸಂಸ್ಕರಣೆ ಯಂತ್ರ ಸ್ಥಾಪಿಸುವ ವೆಚ್ಚದ ಶೇ. 50 ರಷ್ಟು ಆದರೆ 100 ಲಕ್ಷ ರೂಪಾಯಿಗಳಿಗೆ ಮೀರದಷ್ಟು ಏಕಕಾಲಿಕ ಬಂಡವಾಳ ಆಧರಿತ ಸಹಾಯಧನವನ್ನು ನೀಡಲಾಗುವುದು. ವಲಯ 4 ರಲ್ಲಿರುವ ಉತ್ಪಾದನಾ ಘಟಕಗಳಿಗೆ ಈ ಸಹಾಯಧನ 50 ಲಕ್ಷ ರೂಪಾಯಿಗಳಿಗೆ ಸೀಮಿತವಾಗಿದೆ.

**9 ಮೌಲ್ಯವರ್ಧಿತ ತೆರಿಗೆ (VAT) ರ ಮೇಲೆ ಬಡ್ಡಿ ರಹಿತ ಸಾಲ ಸೌಲಭ್ಯ.**

**ಮೆಗಾ ಮತ್ತು ಅಲ್ಟ್ರಾ ಮೆಗಾ ಯೋಜನೆಗಳಿಗೆ**

ವಲಯ 1, 2 ಮತ್ತು 3 ರಲ್ಲಿ ಸ್ಥಾಪಿಸಲಾಗುವ ಎಲ್ಲಾ ಉತ್ಪಾದನಾ ಯೋಜನೆಗಳಿಗೆ ಈ ಕೆಳಗೆ ಸೂಚಿಸಿದಂತೆ VAT ಮೇಲೆ ಬಡ್ಡಿ ರಹಿತ ಸಾಲ ಸೌಲಭ್ಯ ದೊರೆಯುವುದು.

| ಸ್ಥಿರ ಸ್ವತ್ತುಗಳ ಮೇಲೆ ಹೂಡಿದ ಬಂಡವಾಳ (ಕೋಟಿ ರೂ.ಗಳಲ್ಲಿ) | ಕನಿಷ್ಠ ಉದ್ಯೋಗ ನೀಡಿಕೆ (ಸಂಖ್ಯೆ) | ಬಡ್ಡಿ ರಹಿತ ಸಾಲದ ಮೊತ್ತ |
|---|---|---|
| 10 (ಯಂತ್ರೋಪಕರಣಗಳ ಮೇಲೆ ಹೂಡಿದ ಬಂಡವಾಳ) – 50 | ಕನಿಷ್ಠ 100. ಅನಂತರದ ಪ್ರತಿ 10 ಕೋಟಿ ರೂ ಬಂಡವಾಳ ಹೂಡಿಕೆಗೆ 20 ರಂತೆ | 5 ವರ್ಷಗಳಿಗೆ ಲೆಕ್ಕ ಹಾಕಲಾದ ಗ್ರೋಸ್ VAT ತೆರಿಗೆಯ ಮೊತ್ತದ 50% ಆದರೆ ಸ್ಥಿರ ಸ್ವತ್ತುಗಳ ಮೇಲಿನ ಬಂಡವಾಳದ ಶೇ. 100 ರ ಮಿತಿಗೆ ಒಳಪಟ್ಟು.<br>ಈ ಸಾಲವನ್ನು 5 ವರ್ಷಗಳ ನಂತರ 3 ವಾರ್ಷಿಕ ಕಂತುಗಳಲ್ಲಿ ಮರು ಪಾವತಿ ಮಾಡಬೇಕು. |
| 51 – 250 | ಕನಿಷ್ಠ 200 ಅನಂತರದ ಪ್ರತಿ 50 ಕೋಟಿ ರೂ ಬಂಡವಾಳ ಹೂಡಿಕೆಗೆ 50 ರಂತೆ | 6 ವರ್ಷಗಳಿಗೆ ಲೆಕ್ಕ ಹಾಕಲಾದ ಗ್ರೋಸ್ VAT ತೆರಿಗೆಯ ಮೊತ್ತದ 75% ಆದರೆ ಸ್ಥಿರ ಸ್ವತ್ತುಗಳ ಮೇಲಿನ ಬಂಡವಾಳದ ಶೇ. 75 ರ ಮಿತಿಗೆ ಒಳಪಟ್ಟು.<br>ಈ ಸಾಲವನ್ನು 6 ವರ್ಷಗಳ ನಂತರ 3 ವಾರ್ಷಿಕ ಕಂತುಗಳಲ್ಲಿ ಮರು ಪಾವತಿ ಮಾಡಬೇಕು. |

| ಸ್ಥಿರ ಸ್ವತ್ತುಗಳ ಮೇಲೆ ಹೂಡಿದ ಬಂಡವಾಳ (ಕೋಟಿ ರೂ.ಗಳಲ್ಲಿ) | ಕನಿಷ್ಠ ಉದ್ಯೋಗ ನೀಡಿಕೆ (ಸಂಖ್ಯೆ) | ಬಡ್ಡಿ ರಹಿತ ಸಾಲದ ಮೊತ್ತ |
|---|---|---|
| 251 – 1000 | 300 ಕೋಟಿ ಬಂಡವಾಳ ಹೂಡಿಕೆವರೆಗೆ ಕನಿಷ್ಠ 400, ಅನಂತರದ ಪ್ರತಿ 100 ಕೋಟಿ ರೂಗೆ ಬಂಡವಾಳ ಹೂಡಿಕೆಗೆ 50 ರಂತೆ | 7 ವರ್ಷಗಳಿಗೆ ಲೆಕ್ಕ ಹಾಕಲಾದ VAT ತೆರಿಗೆಯ ಮೊತ್ತದ 25% ಆದರೆ ಸ್ಥಿರ ಸ್ವತ್ತುಗಳ ಮೇಲಿನ ಬಂಡವಾಳದ ಶೇ. 50 ರ ಮಿತಿಗೆ ಒಳಪಟ್ಟು.<br>ಈ ಸಾಲವನ್ನು 7 ವರ್ಷಗಳ ನಂತರ 4 ವಾರ್ಷಿಕ ಕಂತುಗಳಲ್ಲಿ ಮರು ಪಾವತಿ ಮಾಡಬೇಕು. |
| 1000 – 3000 | 1000 ಕೋಟಿ ಹೂಡಿಕೆಗೆ ಕನಿಷ್ಠ 750 ಮತ್ತು ಪ್ರತಿ 100 ಕೋಟಿ ರೂ.ಗಳ ಹೆಚ್ಚುವರಿ ಹೂಡಿಕೆಗೆ 25 | 10 ವರ್ಷಗಳಿಗೆ ಲೆಕ್ಕ ಹಾಕಲಾದ VAT ತೆರಿಗೆಯ ಮೊತ್ತದ ಶೇ.25 ರಷ್ಟು. ಆದರೆ ಸ್ಥಿರ ಸ್ವತ್ತುಗಳ ಮೇಲೆ ಬಂಡವಾಳದ ಮೊತ್ತದ 50% ರ ಮಿತಿಗೆ ಒಳಪಟ್ಟು.<br>ಈ ಸಾಲವನ್ನು 10 ವರ್ಷಗಳ ನಂತರ 4 ವಾರ್ಷಿಕ ಕಂತುಗಳಲ್ಲಿ ಮರು ಪಾವತಿ ಮಾಡಬೇಕು. |
| 3000 ರಿಂದ ಮೇಲ್ಪಟ್ಟು | 1250 | 12 ವರ್ಷಗಳಿಗೆ ಲೆಕ್ಕ ಹಾಕಲಾದ VAT ತೆರಿಗೆಯ ಮೊತ್ತದ ಶೇ.25 ರಷ್ಟು. ಆದರೆ ಸ್ಥಿರ ಸ್ವತ್ತುಗಳ ಮೇಲೆ ಬಂಡವಾಳದ ಮೊತ್ತದ 50% ರ ಮಿತಿಗೆ ಒಳಪಟ್ಟು.<br>ಈ ಸಾಲವನ್ನು 12 ವರ್ಷಗಳ ನಂತರ 5 ವಾರ್ಷಿಕ ಕಂತುಗಳಲ್ಲಿ ಮರು ಪಾವತಿ ಮಾಡಬೇಕು. |

ವಲಯ : 4 – ಯಾವುದೇ ಸೌಲಭ್ಯವಿಲ್ಲ.

**10 ಆಂಕರ್ ಘಟಕಕ್ಕೆ ಸಹಾಯಧನ**

ವಲಯ 1, 2 ಮತ್ತು 3 ಗಳ ಪ್ರತಿ ತಾಲ್ಲೂಕಿನಲ್ಲಿ ಕನಿಷ್ಠ 100 ಜನರಿಗೆ ಉದ್ಯೋಗ ನೀಡುವ ಕನಿಷ್ಠ 50 ಕೋಟಿ ರೂಪಾಯಿಗಳ ಬಂಡವಾಳ ಹೂಡಿಕೆಯ ಮೊದಲನೆಯ ಎರಡು ಉತ್ಪಾದನಾ ಘಟಕಗಳಿಗೆ 100 ಲಕ್ಷ ರೂಪಾಯಿಗಳ ಆಂಕರ್ ಘಟಕ ಸಹಾಯಧನ ನೀಡಲಾಗುವುದು. ಈ ಸಹಾಯಧನವು 50 ಕೋಟಿ ರೂಪಾಯಿಗಳ ಬಂಡವಾಳ ಹೂಡಿಕೆಯುಳ್ಳ ಕೈಗಾರಿಕಾ ಉದ್ಯಮಗಳು ಪ್ರಸಕ್ತ ಇಲ್ಲದಿರುವ ತಾಲೂಕುಗಳಿಗೆ ಮಾತ್ರ ಅನ್ವಯವಾಗುತ್ತದೆ.

**11 ಮಾನವ ಅಭಿವೃದ್ಧಿ ಸೂಚ್ಯಂಕ ಅತ್ಯಂತ ಕೆಳಮಟ್ಟದಲ್ಲಿರುವ ಆರು ಜಿಲ್ಲೆಗಳಲ್ಲಿ ಪ್ರಾರಂಭವಾಗುವ ಉದ್ಯಮಗಳಿಗೆ ವಿಶೇಷ ಉತ್ತೇಜನಗಳು**

**ಬೃಹತ್ ಮತ್ತು ಮೆಗಾ ಯೋಜನೆಗಳಿಗೆ :**

ಮಾನವ ಅಭಿವೃದ್ಧಿ ಸೂಚ್ಯಂಕ ಕೆಳಮಟ್ಟದಲ್ಲಿರುವ ರಾಜ್ಯದ ಆರು ಜಿಲ್ಲೆಗಳಲ್ಲಿ ಪ್ರಾರಂಭವಾಗುವ ಮತ್ತು ಡಾ.ಸರೋಜಿನಿ ಮಹಿಷಿ ಶಿಫಾರಸಿನನ್ವಯ ಕನಿಷ್ಠ 75% ಸ್ಥಳೀಯರಿಗೆ ಉದ್ಯೋಗ ನೀಡುವ ಉದ್ಯಮಕ್ಕೆ ವಿಶೇಷ ಉತ್ತೇಜನ ನೀಡಲಾಗುವುದು. ಇದರ ಪ್ರಕಾರ ಉದ್ಯೋಗಿಗಳಿಗೆ ಉದ್ಯೋಗಿಗಳ ಭವಿಷ್ಯನಿಧಿ ಮತ್ತು ಕಾರ್ಮಿಕ ವಿಮಾ ಯೋಜನೆ ಪ್ರಕಾರ ಉದ್ಯೋಗದಾರರು ಮೊದಲ ಐದು ವರ್ಷಗಳಲ್ಲಿ ನೀಡಬೇಕಾಗಿರುವ ವಂತಿಗೆ ಹಣದ 75% ರಷ್ಟನ್ನು ಹಿಂಪಾವತಿ ಮಾಡಲಾಗುವುದು.

ಈ ರೀತಿ ಹಿಂಪಾವತಿ ಮಾಡುವ ಒಟ್ಟು ಮೊತ್ತವು ಸ್ಥಿರ ಸ್ವತ್ತುಗಳಲ್ಲಿ ಹೂಡಿದ ಬಂಡವಾಳದ ಶೇ. 25ಕ್ಕೆ ಸೀಮಿತವಾಗಿರುವುದು. ವಾರ್ಷಿಕವಾಗಿ ಹಿಂಪಾವತಿ ಮಾಡುವ ಮೊತ್ತವು ಕಾನೂನು ಪ್ರಕಾರ ಕನಿಷ್ಠ ವಂತಿಗೆಗೆ ಸಮವಾಗಿದ್ದು, ಉದ್ಯೋಗದಾತರು ತಮ್ಮ ಪಾಲಿನ ವಂತಿಕೆಯನ್ನು ಕ್ಲಪ್ತ ಕಾಲಕ್ಕೆ ESI ಮತ್ತು EPF ಗೆ ಪಾವತಿ ಮಾಡಿರಬೇಕು.

ಈ ಕೆಳಗಿನ ಆರು ಜಿಲ್ಲೆಗಳು ಅತ್ಯಂತ ಕಡಿಮೆ ಮಾನವ ಅಭಿವೃದ್ಧಿ ಸೂಚ್ಯಂಕವನ್ನು ಹೊಂದಿದೆ.

| ಕ್ರಮ ಸಂಖ್ಯೆ | ಜಿಲ್ಲೆ | ಮಾನವ ಅಭಿವೃದ್ಧಿ ಸೂಚ್ಯಂಕ |
|---|---|---|
| 1 | ಬಾಗಲಕೋಟೆ | 0.591 |
| 2 | ಬಿಜಾಪುರ | 0.589 |
| 3 | ಕೊಪ್ಪಳ | 0.582 |
| 4 | ಚಾಮರಾಜನಗರ | 0.576 |
| 5 | ಗುಲ್ಬರ್ಗ | 0.564 |
| 6 | ರಾಯಚೂರು | 0.547 |

( *ಆಧಾರ : ಕರ್ನಾಟಕ ಸರಕಾರದ ಯೋಜನೆ ಮತ್ತು ಸಾಂಖ್ಯಿಕ ಇಲಾಖೆಯು ಪ್ರಕಟಿಸಿದ ಕರ್ನಾಟಕ ಮಾನವ ಅಭಿವೃದ್ಧಿ ವರದಿ 2005)

**12 ಬಡ್ಡಿ ಸಹಾಯಧನ**

**ಹೊಸದಾದ ಅತಿ ಸಣ್ಣ ಉತ್ಪಾದನಾ ಘಟಕಕ್ಕೆ :**

ಅವಧಿ ಸಾಲದ ಮೇಲೆ 5%. ಹಣಕಾಸು ಸಂಸ್ಥೆಗಳಿಗೆ ನಿಜವಾಗಿಯೂ ಪಾವತಿ ಮಾಡಿದ ಬಡ್ಡಿಯ ಮೇಲೆಯೇ ಹೊರತು ಸುಸ್ತಿಯಾದ ಅಸಲು ಅಥವಾ ಬಡ್ಡಿಯ ಮೇಲೆ ಬಡ್ಡಿ ಸಹಾಯಧನವು ಪರಿಣಾಮಕಾರಿ ಬಡ್ಡಿದರ (ಯಾವುದೇ ಸಂಸ್ಥೆಯಿಂದ ಬರತಕ್ಕ / ಕೇಂದ್ರ ಸರಕಾರದ ಯಾವುದೇ ಯೋಜನೆಯನ್ವಯ ಅಥವಾ 5% ಇದರಲ್ಲಿ ಕಡಿಮೆ ಮೊತ್ತಕ್ಕೆ ಸಮನಾದ). ಬಡ್ಡಿ ಸಹಾಯದನವು ವಲಯ 1: 5 ವರ್ಷ; ವಲಯ 2: 4 ವರ್ಷ; ವಲಯ : 3 ವರ್ಷ ಅವಧಿಗೆ ಲಭಿಸಲಿದೆ.

**13 ವಿದ್ಯುತ್ ಶುಲ್ಕದಿಂದ ವಿನಾಯತಿ**

ಅತೀ ಸಣ್ಣ ಮತ್ತು ಸಣ್ಣ ಉತ್ಪಾದನಾ ಘಟಕಗಳಿಗೆ

ವಲಯ 1, ವಲಯ 2, ಮತ್ತು ವಲಯ 3 ರಲ್ಲಿರುವ ಉತ್ಪಾದನಾ ಘಟಕಗಳಿಗೆ ಕ್ರಮವಾಗಿ 5 ವರ್ಷ, 4 ವರ್ಷ, ಮತ್ತು 3 ವರ್ಷ ಗಳವರೆಗೆ ವಿದ್ಯುತ್ ಶುಲ್ಕದಿಂದ ಶೇ. 100 ವಿನಾಯ್ತಿ.

**14 ತಂತ್ರಜ್ಞಾನವನ್ನು ಮೆಲ್ದರ್ಜೆಗೇರಿಸಲು, ಗುಣಮಟ್ಟ ಪ್ರಮಾಣ ಪತ್ರ ಹಾಗೂ ಪೇಟೆಂಟ್ ನೋಂದಾಯಿಸಲು ಉತ್ತೇಜನ**

**ಅತಿ ಸಣ್ಣ ಮತ್ತು ಸಣ್ಣ ಉತ್ಪಾದನಾ ಘಟಕಗಳಿಗೆ**

(i) ಟೆಕ್ನಾಲಜಿ ಅಪ್‌ಗ್ರೇಡೇಷನ್ ಬಡ್ಡಿ ಸಹಾಯಧನ :

ವಲಯ 1, 2, 3 ರಲ್ಲಿ ತಂತ್ರಜ್ಞಾನವನ್ನು ಮೇಲ್ದರ್ಜೆಗೇರಿಸಲು ಕೆ ಎಸ್ ಎಫ್ ಸಿ/ಕೆ ಎಸ್ ಐ ಐ ಡಿ ಸಿ/ ಮತ್ತು ಷೆಡ್ಯೂಲ್ಡ್ ಬ್ಯಾಂಕುಗಳಿಂದ ಪಡೆದ, (ಆದರೆ, ಕೇಂದ್ರ ಸರಕಾರದ ಸಿಎಲ್‌ಸಿ ಎಸ್‌ಎಸ್‌ಗೆ ಒಳಗಾಗದ) ಅವಧಿ ಸಾಲದ ಮೇಲೆ 5% ರಷ್ಟು ಸಹಾಯಧನ.

(ii) ಇ ಎಸ್ ಒ ಶ್ರೇಣಿಯ ಪ್ರಮಾಣೀಕರಣ ವೆಚ್ಚ:

ವಲಯ 1, 2, 3 ರಲ್ಲಿ ಪ್ರಮಾಣೀಕರಣಕ್ಕೆ ತಗಲುವ ವೆಚ್ಚದ 75%, (ಆದರೆ ಗರಿಷ್ಠ 75,000 ರೂಪಾಯಿಗಳು).

(iii) ಬಿ ಐ ಎಸ್ ಪ್ರಮಾಣ ಪತ್ರ :

ಬಿಐಎಸ್ ಗೆ ನೀಡಲಾದ ಶುಲ್ಕದ 50% (ಗರಿಷ್ಠ 25,000 ರೂಪಾಯಿಗಳು) ಮತ್ತು ಬಿ ಐ ಎಸ್ ನಿಂದ ಅನುಮೋದಿತವಾದ ಪರೀಕ್ಷಣಾ ಉಪಕರಣಗಳ ಖರೀದಿಗಾಗಿ ಮಾಡಿದ ವೆಚ್ಚದ 25% (ಗರಿಷ್ಠ 50,000 ರೂಪಾಯಿಗಳು).

(iv) ಪೇಟೆಂಟ್‌ಗಳ ನೋಂದಣಿ :

ಪೇಟೆಂಟ್ ಕಚೇರಿಗೆ ನೀಡಬೇಕಾದ ಶುಲ್ಕದ 75% (ಗರಿಷ್ಠ 1.25 ಲಕ್ಷ ರೂಪಾಯಿಗಳು) ಮತ್ತು ವಕಾಲತು ಶುಲ್ಕದ 50% (ಗರಿಷ್ಠ 75,000 ರೂಪಾಯಿಗಳು)

(v) ತಂತ್ರಜ್ಞಾನದ ಅಳವಡಿಕೆ

ಅಧಿಕೃತ ರಾಷ್ಟ್ರೀಯ ಪ್ರಯೋಗಾಲಯಗಳ ತಂತ್ರ ಜ್ಞಾನವನ್ನು ಅಳವಡಿಸುವ ವೆಚ್ಚದ 50% (ಗರಿಷ್ಠ 50,000 ರೂಪಾಯಿಗಳು),

(vi) ಟೆಕ್ನಾಲಜಿ ಬಿಜಿನೆಸ್ ಇಂಕ್ಯುಬೇಷನ್ ಸೆಂಟರ್ :

ಯೋಜನಾ ವೆಚ್ಚದ 25% (ಗರಿಷ್ಠ 50 ಲಕ್ಷ ರೂಪಾಯಿಗಳು).

**15. ಮಳೆ ಕೊಯ್ಲು ಮತ್ತು ಜಲಸಂರಕ್ಷಣೆ ಕ್ರಮಗಳು :**

**ಸಣ್ಣ ಮತ್ತು ಮಧ್ಯಮ ಯೋಜನೆಗಳಿಗೆ :**

ಎಲ್ಲ ವಲಯಗಳಲ್ಲಿರುವ ಉತ್ಪಾದನಾ ಘಟಕಗಳಿಗೆ

ಮಳೆಕೊಯ್ಲು ವೆಚ್ಚದ 50% (ಗರಿಷ್ಠ 1.0 ಲಕ್ಷರೂಪಾಯಿಗಳು), ಬಳಕೆಯಾದ ನೀರಿನ ಮರು ಬಳಕೆಗೆ ವೆಚ್ಚದ 50% (ಗರಿಷ್ಠ 5.0 ಲಕ್ಷ ರೂಪಾಯಿಗಳು), ಶೂನ್ಯ ತ್ಯಾಜ್ಯ ಸಂಸ್ಕರಣೆಗೆ ವೆಚ್ಚದ 50% (ಗರಿಷ್ಠ 5.0 ಲಕ್ಷರೂಪಾಯಿಗಳು).

**16 ಶಕ್ತಿ ಸಂರಕ್ಷಣೆ**

**ಸಣ್ಣ ಮತ್ತು ಮಧ್ಯಮ ಯೋಜನೆಗಳಿಗೆ :**

ಎಲ್ಲ ವಲಯಗಳಲ್ಲಿರುವ ಸಣ್ಣ ಮತ್ತು ಮಧ್ಯಮ ಪ್ರಮಾಣದ ಉತ್ಪಾದನಾ ಘಟಕಗಳಿಗೆ ಶಕ್ತಿ ಉಳಿತಾಯದ ಕ್ರಮಗಳನ್ನು ಬಳಸಿ ಮೊದಲು ಉಪಯೋಗಿಸುತ್ತಿದ್ದ ಶಕ್ತಿಯ ಕನಿಷ್ಠ 10% ಶಕ್ತಿ ಉಳಿತಾಯವಾದರೆ : ಸ್ಥಿರ ಬಂಡವಾಳದ 10% (ಗರಿಷ್ಠ 5.0 ಲಕ್ಷ ರೂಪಾಯಿಗಳು) ಅಸಂಪ್ರದಾಯಿಕ ಇಂಧನದ ಬಳಕೆಗಾಗಿ: ಸ್ಥಿರ ಬಂಡವಾಳದ 10% (ಗರಿಷ್ಠ 5.0 ಲಕ್ಷ ರೂಪಾಯಿಗಳು).

**17 ರಾಜ್ಯದ ಉದ್ಯೋಗ ಮೀಸಲಾತಿ ನೀತಿಯ ಅನುಷ್ಠಾನಕ್ಕಾಗಿ ಹೆಚ್ಚುವರಿ ಉತ್ತೇಜಕಗಳು :**

ಎಲ್ಲಾ ವಲಯಗಳಲ್ಲಿರುವ, 100 ಕ್ಕಿಂತ ಹೆಚ್ಚು ಜನರಿಗೆ ಉದ್ಯೋಗ ನೀಡುತ್ತಿರುವ ಮಧ್ಯಮ, ಬೃಹತ್ ಮತ್ತು ಮೆಗಾ ಪ್ರಮಾಣದ ಉತ್ಪಾದನಾ ಘಟಕಗಳಿಗೆ:

ಮೀಸಲಾತಿ ಯ ವ್ಯಾಪ್ತಿಗೆ ಒಳಪಟ್ಟಿರುವ ಉದ್ಯೋಗಿಗಳಿಗೆ ಕಾರ್ಮಿಕರ ರಾಜ್ಯ ವಿಮಾ ಮತ್ತು ಉದ್ಯೋಗಿಗಳ ಭವಿಷ್ಯನಿಧಿ ಯೋಜನೆಗಳಿಗೆ ವಂತಿಗೆಯ ಬಾಬ್ತು ಮೊದಲ ಐದು ವರ್ಷಗಳಲ್ಲಿ ಸಲ್ಲಿಸಿದ ಮೊತ್ತವನ್ನು ಮರುಪಾವತಿ ಮಾಡಲಾಗುವುದು.

**18 ಯೋಜನಾವರದಿ ತಯಾರಿಕೆಯ ವೆಚ್ಚದ ಹಿಂಪಾವತಿ**

**ಅತಿ ಸಣ್ಣ ಮತ್ತು ಸಣ್ಣ ಉತ್ಪಾದನಾ ಯೋಜನೆಗಳಿಗೆ**

ವಲಯ 1,2,3: ಸಾಲ ಪಡೆಯುವುದಕ್ಕಾಗಿ ಟೆಕ್ಸಾಕ್/ ಸೀಡಾಕ್/ ಕೆಸ್‌ಎಫ್‌ಸಿ ಮತ್ತಿತರ ಅಧಿಕೃತ ಸಂಸ್ಥೆಗಳಿಂದ ಯೋಜನಾವರದಿ ತಯಾರಿಸಲು ತಗಲುವ ವೆಚ್ಚದ ಬಾಬ್ತು 10000 ರೂಪಾಯಿಗಳಿಗೆ ಮೀರದಂತೆ, ಸಾಲ ಮಂಜೂರಾತಿಯ ಷರತ್ತಿನ ಮೇಲೆ ಮರುಪಾವತಿ ಮಾಡಲಾಗುವುದು.

**19 ಸಕ್ಕರೆ ಉದ್ಯಮಕ್ಕೆ ಬೆಂಬಲ**

ಕೋ–ಜನರೇಶನ್ ಮತ್ತು ಎಥೆನೋಲ್ ಉತ್ಪಾದನೆಗೆ ಸೌಕರ್ಯವುಳ್ಳ ಹೊಸದಾದ ಅಥವಾ ಚಾಲ್ತಿಯಲ್ಲಿರುವ ಖರೀದಿ ತೆರಿಗೆ ಮುಂದೂಡಿಕೆಯನ್ನು ಉಪಯೋಗಿಸಿ ಕೊಳ್ಳದಿರುವ ಸಕ್ಕರೆ ಕಾರ್ಖಾನೆಗಳಿಗೆ ಕಬ್ಬು ಖರೀದಿ ತೆರಿಗೆಯನ್ನು ಬಡ್ಡಿ ರಹಿತ ಸಾಲವನ್ನಾಗಿ ಪರಿವರ್ತಿಸಲು ಕಾರ್ಖಾನೆಯ ಆರ್ಥಿಕ ಸ್ಥಿತಿಗೆ ಅನುಗುಣವಾಗಿ ಪರಿಗಣಿಸಲಾಗುವುದು.

ಚಾಲ್ತಿಯಲ್ಲಿರುವ ಸಕ್ಕರೆ ಕಾರ್ಖಾನೆಗಳು ಕೋ–ಜನರೇಶನ್, ಎಥೆನೋಲ್ ಮತ್ತಿತರ ಸೌಕರ್ಯಗಳಿಗೆ ಬಂಡವಾಳ ಹೂಡಿದಾಗ ಅದನ್ನು ವಿಸ್ತರಣೆ ಎಂದು ಪರಿಗಣಿಸಿ ಈ ನೀತಿಯ ಪ್ರಕಾರ ಉತ್ತೇಜನ ಮತ್ತು ರಿಯಾಯಿತಿಗಳನ್ನು ನೀಡಲಾಗುವುದು. ಆದರೆ, ಇಂತಹ ಸೌಕರ್ಯಕ್ಕೆ ಹೂಡಲಾದ ಹೆಚ್ಚಿನ ಬಂಡವಾಳವನ್ನು ಮಾತ್ರ ಪರಿಗಣಿಸಲಾಗುವುದು.

**ಅನುಬಂಧ – 3**

## ಉತ್ತೇಜನಗಳಿಗೆ ಅರ್ಹವಿರುವ ಸೇವಾಕ್ಷೇತ್ರದ ಚಟುವಟಿಕೆಗಳು

1 ಕೈಗಾರಿಕೆಗಳಿಗೆ ನೆರವಾಗುವ ಲ್ಯಾಜಿಸ್ಟಿಕ್ಸ್ ಸೌಕರ್ಯಗಳು (ಪ್ರತ್ಯೇಕವಾಗಿ ಪರಿಭಾಷೆಯನ್ನು ಹೊರಡಿಸಲಾಗುವುದು)

2 ಮೆಟೀರಿಯಲ್ ಟೆಸ್ಟಿಂಗ್ ಸೆಂಟರ್

3 ಆರ್ ಅಂಡ್ ಡಿ ಸೆಂಟರ್

4 ಟೆಕ್ನಿಕಲ್ ಟೆಸ್ಟಿಂಗ್ ಮತ್ತು ಅನಾಲಿಸಿಸ್ ಸರ್ವಿಸಸ್

5 ಮೈನ್‌ಟೇನ್ಸ್ ಮತ್ತು ರಿಪೇರಿ ಆಫ್ ಎಕ್ವಿಪ್‌ಮೆಂಟ್

6 ಪ್ಯಾಕೇಜಿಂಗ್ ಸರ್ವಿಸಸ್

7 ತ್ಯಾಜ್ಯ ವಸ್ತುಗಳ ವಿಲೇವಾರಿ ಸೇವೆ

8 ಟೈಲರಿಂಗ್

9 ಹಿಟ್ಟಿನ ಗಿರಣಿಗಳು

10 ಮುದ್ರಣ

11 ಜನರಲ್ ಇಂಜಿನಿಯರಿಂಗ್, ಫ್ಯಾಬ್ರಿಕೇಷನ್, ಮೋಟರ್ ವೈಂಡಿಂಗ್, ಆಟೋಮೋಬೈಲ್ ಸರ್ವಿಸ್ ಮತ್ತು ರಿಪೇರಿ, ಎಲೆಕ್ಟ್ರೋಪ್ಲೇಟಿಂಗ್, ಇಂಡಸ್ಟ್ರಿಯಲ್ ಪೈಂಟಿಂಗ್ ಮುಂತಾದ ಜಾಬ್ ವರ್ಕ್‍ಗಳು

12 ಕೆ ಐ ಎ ಡಿ ಬಿ / ಕೆ ಎಸ್ ಎಸ್ ಐ ಡಿ ಸಿ ಕೈಗಾರಿಕಾ ಪ್ರದೇಶದಲ್ಲಿ ಸ್ಥಾಪಿತವಾಗುವ ವೇ ಬ್ರಿಡ್ಜ ಮತ್ತು ಹೆಲ್ತ್ ಕೇರ್ ಸೌಲಭ್ಯಗಳು

ರಾಜ್ಯ ಮಟ್ಟದ ಸಂಯೋಜನಾ ಸಮಿತಿಯು ಈ ಅನುಬಂಧದಲ್ಲಿ ಸೇವಾ ಚಟುವಟಿಕೆಗಳನ್ನು ಸೇರಿಸಲು / ತೆಗೆಯಲು ಅಧಿಕಾರಯುಕ್ತವಾಗಿದೆ.

**ಅನುಬಂಧ – 4**

**ಉತ್ತೇಜನ ಮತ್ತು ರಿಯಾಯತಿಗಳಿಗೆ ಅನರ್ಹವಾದ ಕೈಗಾರಿಕಾ ಚಟುವಟಿಕೆಗಳು**

| ಕ್ರಮ ಸಂಖ್ಯೆ | ಚಟುವಟಿಕೆಗಳು |
|---|---|
| 1 | ವೈನರಿ ಹೊರತಾದ ಮದ್ಯ ತಯಾರಿಸುವ ಮತ್ತು ಭಟ್ಟಿ ಇಳಿಸುವ ಎಲ್ಲಾ ವಿಧದ ಘಟಕಗಳು |
| 2 | ಕಾಕಂಬಿ / ರೆಕ್ಟಿಫೈಡ್ ಸ್ಪಿರಿಟ್ /ಡಿನೇಚರ್ಡ್ ಸ್ಪಿರಿಟನ್ನು ಕಚ್ಚಾಮಾಲನ್ನಾಗಿ ಉಪಯೋಗಿಸುವ ಪಾನಯೋಗ್ಯ ಆಲ್ಕೋಹಾಲ್‍ಗಳನ್ನು ತಯಾರಿಸುವ ಘಟಕಗಳು |
| 3 | ಖಂಡಸಾರಿ ಮತ್ತು ಬೆಲ್ಲ ತಯಾರಿಸುವ ಘಟಕಗಳು |
| 4 | ಫೋಟೋ ಸ್ಟುಡಿಯೋ ಮತ್ತು ವರ್ಣಸಂಸ್ಕರಣ ಕೇಂದ್ರಗಳು |
| 5 | ಫೊಟೊಕಾಪಿ ಮತ್ತು ಝೆರಾಕ್ಸ್ ಯಂತ್ರಗಳು |
| 6 | ರಾಸಾಯನಿಕ ಗೊಬ್ಬರಗಳ ಸಂಮಿಶ್ರಣ ಘಟಕಗಳು |
| 7 | ಮೂಲಔಷಧಿ/ತಯಾರಿಸಿದ ಔಷಧಿ/ರಾಸಾಯನಿಕ ವಸ್ತುಗಳನ್ನು ಯಾವುದೇ ಸಂಸ್ಕರಣೆ/ಮೌಲ್ಯ ವರ್ಧನೆ ಇಲ್ಲದೆ ಕೇವಲ ಮರು ಪ್ಯಾಕಿಂಗ್ ಮಾಡುವುದು |
| 8 | ಮರಮಟ್ಟು ಸಿಗಿಯುವ ಕಾರ್ಖಾನೆ |
| 9 | ಬೀಡಿ, ಸಿಗರೇಟು, ಗುಟ್ಕ ಮತ್ತು ತಂಬಾಕು ಆಧಾರಿತ ಉತ್ಪನ್ನಗಳು |
| 10 | ಆಝೋಯಿಕ್ ಮತ್ತು ರಿಯಾಕ್ಟಿವ್ ಬಣ್ಣಗಳು |
| 11 | ಸುಡುಮದ್ದುಗಳು/ ಪಟಾಕಿಗಳು |
| 12 | ಒಝೋನ್ ಹಾನಿಗೊಳಿಸುವ ವಸ್ತುಗಳನ್ನು ಉಪಯೋಗಿಸಿ ತಯಾರಿಸುವ ಉತ್ಪನ್ನಗಳು |
| 13 | ವಿದ್ಯುತ್ ಲಾಂಡ್ರಿಗಳು |
| 14 | ಸಿಮೆಂಟ್ ಹಾಲೊಬ್ಲಾಕ್/ವೈರ್ ಕಟ್/ ಫ್ಲೈಆಶ್ ಮತ್ತು ರಿಫ್ರಾಕ್ಟರಿ ಇಟ್ಟಿಗೆಗಳ ಹೊರತಾದ ಇಟ್ಟಿಗೆ ತಯಾರಿಸುವ ಉದ್ಯಮ |
| 15 | ಹ್ಯಾಚರಿ ಹೊರತಾದ ಕೋಳಿಸಾಕಣೆ ಉದ್ಯಮ |
| 16 | ಪಾಪ್ ಕಾರ್ನ್, ಐಸ್ ಕ್ರೀಮ್, ಕುಲ್ಫಿ, ಮತ್ತು ಐಸ್ ಕ್ಯಾಂಡಿ ತಯಾರಿಕಾ ಘಟಕಗಳು |
| 17 | ಕಾಫಿ ಬೀಜ ಹುರಿಯುವುದು ಮತ್ತು ಪುಡಿಮಾಡುವುದು |
| 18 | ಗಡಿಯಾರ ಮತ್ತು ಕೈಗಡಿಯಾರ ರಿಪೇರಿ |
| 19 | ಶ್ರಾವ್ಯ ಮತ್ತು ದೃಶ್ಯ ಕ್ಯಾಸೆಟ್ ಧ್ವನಿಮುದ್ರಣ |
| 20 | ಸಯನೈಡ್ |

| ಕ್ರಮ ಸಂಖ್ಯೆ | ಚಟುವಟಿಕೆಗಳು |
|---|---|
| 21 | ಗಣಿಗಾರಿಕೆ |
| 22 | ಸುಣ್ಣದ ಗೂಡು ಮತ್ತು ಸುಣ್ಣಸುಡುವಿಕೆ |
| 23 | ಹೋಟೆಲ್ ಮತ್ತು ಮೋಟೆಲ್‌ಗಳು |
| 24 | ಕ್ಷ–ಕಿರಣ ಕ್ಲಿನಿಕ್/ಕ್ಲಿನಿಕಲ್/ ರೋಗತಪಾಸಣಾ ಪ್ರಯೋಗಾಲಯ/ ಮತ್ತು ಸ್ಕ್ಯಾನಿಂಗ್, ಎಮ್ ಆರ್ ಐ ಪರೀಕ್ಷೆಗಳು |
| 25 | ಬೋರ್‌ವೆಲ್ ರಿಗ್‌ಗಳು, ಕಾಂಕ್ರೀಟ್ ಮಿಶ್ರಣ ಯಂತ್ರಗಳು, ಉಷ್ಣಮಿಶ್ರಣ ಯಂತ್ರಗಳು, ಯೋಜನಾ ಸ್ಥಳದಲ್ಲಿ ಕೆಲಸಮಾಡುವ ಯಂತ್ರ ಸ್ಥಾವರಗಳು ಮೊದಲಾದ ಚಲನಶೀಲ ಘಟಕಗಳು. |

**ಅನುಬಂಧ – 5**

**ಉತ್ತೇಜನ ಮತ್ತು ರಿಯಾಯಿತಿಗಳ ಮಂಜೂರಾತಿಗಿರುವ ಪರಿಭಾಷೆಗಳು, ನಿಯಮ ಮತ್ತು ನಿಬಂಧನೆಗಳು**

**1. ಪರಿಭಾಷೆ**

ಎ) ಎಂ ಎಸ್ ಎಂ ಇ ಡಿ ಕಾಯಿದೆ 2006 ರ ಪ್ರಕಾರ ಉತ್ಪಾದನಾ ಘಟಕಗಳನ್ನು ಅವುಗಳ ಯಂತ್ರ ಸ್ಥಾವರಗಳಲ್ಲಿ ಹೂಡಲಾದ ಬಂಡವಾಳದ ಪ್ರಕಾರ ಈ ಕೆಳಗಿನಂತೆ ವರ್ಗೀಕರಿಸಲಾಗಿದೆ.

| | | |
|---|---|---|
| ಅತಿ ಸಣ್ಣ ಉದ್ಯಮ | : | 25 ಲಕ್ಷ ರೂಪಾಯಿಗಳ ವರೆಗಿನ ಬಂಡವಾಳ ಹೂಡಿಕೆ |
| ಸಣ್ಣ ಉದ್ಯಮ | : | 25 ಲಕ್ಷ ರೂಪಾಯಿಗಳಿಂದ 500 ಲಕ್ಷ ರೂಪಾಯಿಗಳವರೆಗೆ ಬಂಡವಾಳ ಹೂಡಿಕೆ |
| ಮಧ್ಯಮ | : | 500 ಲಕ್ಷ ರೂಪಾಯಿಗಳಿಂದ 1000 ಲಕ್ಷ ರೂಪಾಯಿಗಳ ವರೆಗೆ ಬಂಡವಾಳ ಹೂಡಿಕೆ. |

ಬಿ) ಎಂ ಎಸ್ ಎಂ ಇ ಡಿ ಕಾಯಿದೆ 2006 ರ ಪ್ರಕಾರ ಸೇವಾ ಉದ್ಯಮಗಳನ್ನು ಅವುಗಳ ಉಪಕರಣಗಳ ಮೇಲೆ ಹೂಡಲಾದ ಬಂಡವಾಳದ ಪ್ರಕಾರ ಈ ಕೆಳಗಿನಂತೆ ವರ್ಗೀಕರಿಸಲಾಗಿದೆ.

| | | |
|---|---|---|
| ಅತಿ ಸಣ್ಣ ಉದ್ಯಮ | : | ರೂ. 10 ಲಕ್ಷಗಳವಗೆಗಿನ ಬಂಡವಾಳ ಹೂಡಿಕೆ |
| ಸಣ್ಣ ಉದ್ಯಮ | : | ರೂ. 10 ಲಕ್ಷ ರೂಪಾಯಿಗಳಿಂದ 200 ಲಕ್ಷ ರೂಪಾಯಿಗಳ ವರೆಗೆ ಬಂಡವಾಳ ಹೂಡಿಕೆ |
| ಮಧ್ಯಮ | : | 200 ಲಕ್ಷ ರೂಪಾಯಿಗಳಿಂದ 500 ಲಕ್ಷ ರೂಪಾಯಿಗಳ ವರೆಗೆ ಬಂಡವಾಳ ಹೂಡಿಕೆ. |

| | | | |
|---|---|---|---|
| ಸಿ) | ಬೃಹತ್ ಉದ್ಯಮ | : | ಅತಿ ಸಣ್ಣ, ಸಣ್ಣ, ಮಧ್ಯಮ ಪ್ರಮಾಣಗಳೆಂದು ವರ್ಗೀಕೃತ ಮಾಡಿಲ್ಲದ ಉದ್ಯಮಗಳು ಹಾಗೂ ರೂ.250 ಕೋಟಿವರೆಗೆ ಬಂಡವಾಳ ಇರುವ ಉದ್ಯಮಗಳು |
| ಡಿ) | ಮೆಗಾ ಯೋಜನೆ | : | 250 ಕೋಟಿ ರೂಪಾಯಿ ಅಥವಾ ಅದಕ್ಕಿಂತ ಹೆಚ್ಚಿನ ಬಂಡವಾಳ ಹೂಡಿಕೆಯ ಉದ್ಯಮ. |

ಇ) ಶೇಕಡಾ 100 ರಫ್ತು ಆಧರಿತ ಉದ್ಯಮ ಕಾಲಕಾಲಕ್ಕೆ ಕೇಂದ್ರ ಸರ್ಕಾರವು ಅನುಮೋದಿಸುವ ಸಡಿಲತೆಗೆ ಒಳಪಟ್ಟಂತೆ ತನ್ನ ಸಂಪೂರ್ಣ ಉತ್ಪನ್ನವನ್ನು ರಫ್ತು ಮಾಡುವ ಉದ್ಯಮಗಳಿಗೆ ಶೇಕಡಾ 100 ರಫ್ತು ಉದ್ದೇಶಿತ ಉದ್ಯಮವೆಂದು ನಿರ್ವಾಚಿಸಲಾಗುತ್ತದೆ. ಇಂತಹ ಉದ್ಯಮಗಳನ್ನು ರಫ್ತು ಉದ್ದೇಶಿತ ಉದ್ಯಮಗಳು (EOE) / ರಫ್ತುವರ್ಧಕ ಕೈಗಾರಿಕಾ ಪಾರ್ಕ್ ಯೋಜನೆ (EPIP) / ಎಲೆಕ್ಟ್ರಾನಿಕ್ ಹಾರ್ಡ್‌ವೇರ್ ಟೆಕ್ನಾಲಜಿ ಪಾರ್ಕ್ (EHTP) ಯೋಜನೆ / ಸಾಫ್ಟ್ ವೇರ್ ಟೆಕ್ನಾಲಜಿ ಪಾರ್ಕ್ ಯೋಜನೆ / ವಿಶೇಷ ಆರ್ಥಿಕ ವಲಯ ಯೋಜನೆಗಳಡಿಯಲ್ಲಿ ಸ್ಥಾಪಿಸಬಹುದು.

ಎಫ್) ಸ್ಥಿರ ಸ್ವತ್ತು : ನಿವೇಶನ, ಕಟ್ಟಡ, ಯಂತ್ರಸ್ಥಾವರ, ಉತ್ಪಾದಕ ಸಲಕರಣೆಗಳಾದ ಟೂಲ್, ಜಿಗ್, ಫಿಕ್ಸ್‌ಚರ್ಸ್, ಡೈಸ್, ಬಳಕೆ ಸಾಧನಗಳಾದ ಬಾಯ್ಲರ್, ಕಂಪ್ರೆಸ್ಸರ್, ಡೀಸೆಲ್ ಜನರೇಟರ್, ಕ್ರೇನ್ಸ್, ಮೆಟೀರಿಯಲ್

ಹ್ಯಾಂಡ್ಲಿಂಗ್ ಸಾಧನಗಳು ಮತ್ತು ಉತ್ಪಾದನಾ ಕ್ರಿಯೆಯಲ್ಲಿ ನೇರವಾಗಿ ಬಳಕೆಯಾಗುವ ಸಾಧನ ಸಲಕರಣೆಗಳ ಮೇಲೆ ಹೂಡಲಾದ ಬಂಡವಾಳ.

**2. ಈ ಸರಕಾರೀ ಆದೇಶದ ಪ್ರಕಾರ ನೀಡಲಾಗುವ ಉತ್ತೇಜಕ ಮತ್ತು ರಿಯಾಯಿತಿಗಳ ಈ ಕೆಳಗಿನ ನಿಯಮ ಮತ್ತು ನಿಬಂಧನೆಗಳಿಗೆ ಒಳಪಟ್ಟಿದೆ**

ಎ) ಹೊಸದಾಗಿ ಕೈಗಾರಿಕಾ ಬಂಡವಾಳ ಹೂಡಿಕೆಯಾಗುವ ಎಲ್ಲಾ ಉದ್ಯಮಗಳು ಅತ್ಯಧಿಕ ಹೆಚ್ಚುವರಿ ಉದ್ಯೋಗಾವಕಾಶಗಳನ್ನು ಸೃಷ್ಟಿಸಿ, ಒಟ್ಟು ಉದ್ಯೋಗದ ಶೇಕಡಾ 80 ರಷ್ಟನ್ನು ಸ್ಥಳೀಯರಿಗೆ ನೀಡಬೇಕು (ಸಿ ಮತ್ತು ಡಿ ವರ್ಗಗಳ ಶೇಕಡಾ 100 ರಷ್ಟು ಉದ್ಯೋಗಗಳನ್ನು ಸ್ಥಳೀಯರಿಗೇ ನೀಡಲು ಒತ್ತಾಯಿಸಲಾಗುವುದು). ಈ ವಿಚಾರದಲ್ಲಿ ಉತ್ತೇಜಕ ಮತ್ತು ರಿಯಾಯಿತಿಗಳನ್ನು ವಿತರಿಸುವಾಗ ನಿಗಾ ವಹಿಸಲಾಗುವುದು. ಸ್ಥಳೀಯರಿಗೆ ಉದ್ಯೋಗ ನೀಡುವ ವಿಚಾರದಲ್ಲಿ ಜಿಲ್ಲಾ ಕೈಗಾರಿಕಾ ಕೇಂದ್ರವು ಐದು ವರ್ಷಗಳ ವರೆಗೆ ಮೇಲ್ವಿಚಾರಣೆ ಮಾಡುವುದು. ಮೇಲೆ ತಿಳಿಸಿದ ರೀತಿಯವರಿಗೆ ಸ್ಥಳೀಯರಿಗೆ ಉದ್ಯೋಗ ಕೊಡುವುದಕ್ಕೆ ತಪ್ಪಿದಾಗ ವಿಷಯವನ್ನು ಸಂಬಂಧಪಟ್ಟ DLSWCC / SLSWCC / SHLCC ಗೆ ವರದಿ ಮಾಡಲಾಗುವುದು. ಆಗ ಸಮಿತಿಯು ಉದ್ಯಮಕ್ಕೆ ನೀಡಲಾದ ಉತ್ತೇಜನ ಮತ್ತು ರಿಯಾಯಿತಿಗಳನ್ನು ಹಿಂದಕ್ಕೆ ಪಡೆಯುವಂತೆ ಶಿಫಾರಸು ಮಾಡುವುದು. ಈ ವಿಚಾರಕ್ಕೆ ಸಂಬಂಧಪಟ್ಟಂತೆ ಸೂಕ್ತ ಮುಚ್ಚಳಿಕೆ ಪತ್ರವನ್ನು ಉತ್ತೇಜನ ಮತ್ತು ರಿಯಾಯಿತಿಗಳನ್ನು ವಿತರಿಸುವ ಮುಂಚೆಯೇ ಉದ್ಯಮವು ಬರೆದುಕೊಡಬೇಕಾಗಿದೆ.

ಬಿ) ಯಾವುದೇ ಸ್ಥಳದಲ್ಲಿ ಸ್ಥಾಪಿಸಲಾದರೂ **ಅನುಬಂಧ–4** ರಲ್ಲಿ ಸೂಚಿಸಲಾದ ಚಟುವಟಿಕೆಗಳು / ಉದ್ಯಮಗಳು ಈ ಉತ್ತೇಜನ ಮತ್ತು ರಿಯಾಯಿತಿಗಳಿಗೆ ಅರ್ಹವಾಗಿರುವುದಿಲ್ಲ.

ಸಿ) ಈ ಸರ್ಕಾರೀ ಆದೇಶವು 01.04.2009 ರಿಂದ ನಂತರ ಮಾಡಿದ ಹೆಚ್ಚುವರಿ ಮತ್ತು ಹೊಸ ಹೂಡಿಕೆಗಳಿಗೆ ಅನ್ವಯವಾಗುವುದು.

ಡಿ) ಈ ಕೈಗಾರಿಕಾ ನೀತಿಯಂತೆ ಉತ್ತೇಜಕ ಮತ್ತು ರಿಯಾಯಿತಿಗಳು ಹೊಸದಾದ / ವಿಸ್ತರಣೆ / ವೈವಿಧ್ಯೀಕರಣ ಮತ್ತು ಆಧುನೀಕರಣಕ್ಕಾಗಿ ಮಾಡಲಾದ ಬಂಡವಾಳ ಹೂಡಿಕೆಗಳು ಅರ್ಹವಾಗಿವೆ. ವಿಸ್ತರಣೆ / ಆಧುನೀಕರಣ / ವೈವಿಧ್ಯೀಕರಣ ಯೋಜನೆಯು ಅರ್ಹತೆ ಪಡೆಯಬೇಕಾದರೆ ಹಾಲಿ ಉದ್ಯಮವು ಕನಿಷ್ಠವಾಗಿ ಮೂಲ ವಿನಿಯೋಜನೆಯ ಶೇಕಡಾ 50 ರಷ್ಟು ಬಂಡವಾಳವನ್ನು ಹೂಡಬೇಕಾಗುವುದು.

ಇ) ಬಂಡವಾಳ ಹೂಡಿಕೆಯ ಮೇಲಿನ ಸಹಾಯಧನವು ಹಣಕಾಸು ಸಂಸ್ಥೆ ಅಥವಾ ಬ್ಯಾಂಕು ನಿಗದಿಪಡಿಸಿದ ಮೊತ್ತದ ಮೇಲೆ ಲೆಕ್ಕ ಹಾಕಲಾಗುವುದು.

ಎಫ್) ಮೇಲೆ ಸೂಚಿಸಲಾದ ಅತಿಸಣ್ಣ, ಸಣ್ಣ ಮತ್ತು ಮಧ್ಯಮ ಮತ್ತು ದೊಡ್ಡ ಉದ್ಯಮಗಳ ಪರಿಭಾಷೆಯು ಕೇಂದ್ರ ಸರ್ಕಾರವು ಮಾಡುವ ಬದಲಾವಣೆಗೆ ಅನುಗುಣವಾಗಿ ತಂತಾನೇ ಬದಲಾಗುವುದು. ಬದಲಾದ ಪರಿಭಾಷೆಗೆ ಅನುಗುಣವಾಗಿ ಲಭ್ಯವಿರುವ ಉತ್ತೇಜನ ಮತ್ತು ರಿಯಾಯಿತಿಗಳ ಬದಲಾದ ದಿನಾಂಕದಿಂದ ಅನ್ವಯವಾಗುವಂತೆ ಪರಿಷ್ಕಾರಕ್ಕೆ ಒಳಗಾಗುವುದು.

ಜಿ) ಈ ನೀತಿಯ ಪ್ರಕಾರ ಲಭ್ಯವಿರುವ ಉತ್ತೇಜನ ಮತ್ತು ರಿಯಾಯಿತಿಗಳು 1ನೇ ಏಪ್ರಿಲ್ 2009 ರಿಂದ ರವರೆಗಿನ ಐದು ವರ್ಷಗಳ ಅವಧಿಗೆ (ಅಂದರೆ : 31ನೇ ಮಾರ್ಚ್ 2014) ರವರೆಗೆ ಚಾಲ್ತಿಯಲ್ಲಿರುತ್ತದೆ.

ಹೆಚ್) ಉದ್ಯಮವು ಕೇಂದ್ರ / ರಾಜ್ಯ ಸರ್ಕಾರದ ಇತರ ಯೋಜನೆಗಳನ್ವಯ ಸಹಾಯಧನ / ಬಡ್ಡಿ ಸಹಾಯಧನ ಪಡೆದಿದ್ದರೆ ಈ ನೀತಿಯನ್ವಯ ವ್ಯತ್ಯಾಸವಿರುವ ಸಹಾಯಧನ / ಬಡ್ಡಿ ಸಹಾಯಧನ ಮಾತ್ರ ನೀಡಲಾಗುವುದು.

ಐ) ಈ ನೀತಿಯನ್ವಯ ಉತ್ತೇಜನ ಮತ್ತು ರಿಯಾಯಿತಿಗಳು ಉತ್ಪಾದನಾ ಉದ್ಯಮಗಳಿಗೆಮಾತ್ರ ಲಭ್ಯವಿರುವುದು. ಆದರೂ ಕೂಡಾ, **ಅನುಬಂಧ–3** ರಲ್ಲಿ ಪಟ್ಟಿ ಮಾಡಿರುವ ಕೆಲವೊಂದು ಸೇವಾ ಚಟುವಟಿಕೆಗಳಿಗೆ ಕೂಡಾ ಉತ್ತೇಜನ ಮತ್ತು ರಿಯಾಯಿತಿಗಳು ಲಭ್ಯವಿದೆ.

ಜೆ) ಈ ರೀತಿಯನ್ವಯ ಉತ್ತೇಜನ ಮತ್ತು ರಿಯಾಯಿತಿಗಳು ಏಪ್ರಿಲ್ 1, 2009 ರಿಂದ ಜಾರಿಗೆ ಬರುತ್ತವೆ. ಈ ನೀತಿಯ ಘೋಷಣೆಯೊಂದಿಗೆ ಈ ಹಿಂದೆ ಘೋಷಿಸಲಾದ ಕೈಗಾರಿಕಾ ನೀತಿಗಳನ್ನು ಹಿಂದಕ್ಕೆ ಪಡೆಯಲಾಗಿದೆ. ಆದಾಗ್ಯೂ ಈ ಹಿಂದಿನ ಕೈಗಾರಿಕಾ ನೀತಿ / ಆದೇಶಗಳ ಪ್ರಕಾರ ಉತ್ತೇಜನ ಮತ್ತು ರಿಯಾಯಿತಿಗಳನ್ನು ಪಡೆಯುತ್ತಿರುವ ಉದ್ಯಮಗಳು ಈ ಹಿಂದಿನ ಮಂಜೂರಾತಿ ಪತ್ರದನ್ವಯ ಸೌಲಭ್ಯಗಳಿಗೆ ಅರ್ಹವಾಗಿರುತ್ತವೆ.

ಕೆ) ಸರ್ಕಾರೀ ಆದೇಶ ಸಂಖ್ಯೆ ಸಿಐ 319 ಎಸ್ ಪಿ ಐ 2005 ದಿನಾಂಕ 26.08.2006 ರ ಪ್ರಕಾರ ಕೈಗಾರಿಕಾ ನೀತಿ 2006–11 ಪ್ರಕಟವಾದಾಗ ಕೈಗಾರಿಕಾ ಘಟಕಗಳು ಪ್ರಾರಂಭವಾಗಿದ್ದರೆ, ಅವುಗಳಿಗೆ ಸರ್ಕಾರೀ ಆದೇಶ ಸಿಐ 167 ಎಸ್ ಪಿ ಐ 2001 ದಿನಾಂಕ 30.06.2001 ರ ಅನ್ವಯ ಪ್ರಕಟಿಸಿದ 2001–06 ರ ಕೈಗಾರಿಕಾ ನೀತಿಯ ಪ್ರಕಾರ ಉತ್ತೇಜನ ಮತ್ತು ರಿಯಾಯಿತಿಗಳು ಈ ಕೆಳಗಿನ ನಿಯಮ ಮತ್ತು ನಿಬಂಧನೆಗಳಿಗೆ ಅನುಗುಣವಾಗಿ ಇರುತ್ತದೆ.

(i) ಬ್ಯಾಂಕಿನಿಂದ ಹಣಕಾಸು ಸೌಲಭ್ಯ ಪಡೆದ ಸಂದರ್ಭಗಳಲ್ಲಿ

01.04.2006 ರಿಂದ ಮೊದಲು ಹಣಕಾಸು ಸಂಸ್ಥೆಗಳಿಂದ ಸಾಲ ಮಂಜೂರಾಗಿದ್ದರೆ 2001–06 ರ ಕೈಗಾರಿಕಾ ನೀತಿಯಡಿಯಲ್ಲಿ ಕೆಳಗಿನ ಎಲ್ಲಾ ಷರತ್ತುಗಳಿಗನುಗುಣವಾಗಿ ಪರಿಗಣಿಸಲಾಗುವುದು.

1. ಘಟಕವು 31.03.2006 ರ ಮೊದಲು ಖಾಯಂ ನೋಂದಣಿ ಪ್ರಮಾಣ ಪತ್ರ (PRC/IEM) ಪಡೆದಿರಬೇಕು.

2. ಸಾಲದ ಮೊದಲ ಕಂತು ವಿತರಣೆಯಾಗಿರಬೇಕು.

3. ಯಂತ್ರ ಸ್ಥಾವರಗಳ ಸರಬರಾಜಿಗೆ ಆರ್ಡರ್ ಸಲ್ಲಿಸಿರಬೇಕು.

4. ಕಟ್ಟಡದ ಶೇಕಡಾ 50 ರಷ್ಟು ಪೂರ್ಣಗೊಂಡಿರಬೇಕು ಮತ್ತು 30.9.2006 ರ ಮೊದಲು ವಾಣಿಜ್ಯ ಮಟ್ಟದ ಉತ್ಪಾದನೆ ಆರಂಭಿಸಿರಬೇಕು.

(ii) ಸ್ವಯಂ ಹಣಕಾಸಿನ ಸಂದರ್ಭದಲ್ಲಿ

ಸ್ವಯಂ ಹಣಕಾಸಿನಿಂದ ಸ್ಥಾಪಿಸಲ್ಪಟ್ಟ ಉದ್ಯಮಗಳು 2001–06 ಕೈಗಾರಿಕಾ ನೀತಿಯನ್ವಯ ಸೌಲಭ್ಯಗಳನ್ನು ಪಡೆಯಲು ಅರ್ಹವಾಗಿರಬೇಕಾದರೆ 31.03.2006 ರ ಒಳಗೆ ಈ ಕೆಳಗಿನ ಷರತ್ತುಗಳನ್ನು ಪೂರೈಸಿರಬೇಕು.

1. ಘಟಕವು 31.03.2006 ರ ಮೊದಲು PRC/IEM ಸ್ವೀಕೃತಿ ಪಡೆದಿರಬೇಕು

2. ಜಮೀನು ಖರೀದಿಸಿರಬೇಕು / ಕೃಷಿ ಭೂಮಿ ಕೃಷಿಯೇತರ ಉದ್ದೇಶಗಳಿಗಾಗಿ ಪರಿವರ್ತನೆಯಾಗಿರಬೇಕು / ಬಾಡಿಗೆ ಜಾಗ / ಕಟ್ಟಡಗಳಿಗೆ ಬಾಡಿಗೆ ಕರಾರು ಮಾಡಿಕೊಂಡಿರಬೇಕು.

3. ಸ್ವಂತ/ಬಾಡಿಗೆ ಜಾಗದಲ್ಲಿ ಕಟ್ಟಡವು ಶೇಕಡಾ 50 ರಷ್ಟು ಪೂರ್ಣಗೊಂಡಿರಬೇಕು.

4. ಯಂತ್ರ ಸ್ಥಾವರಗಳ ಸರಬರಾಜಿಗೆ ಆರ್ಡರ್ ಸಲ್ಲಿಸಿರಬೇಕು ಮತ್ತು 30.09.2006 ರ ಒಳಗೆ ವಾಣಿಜ್ಯ ಮಟ್ಟದ ಉತ್ಪಾದನೆ ಆರಂಭಿಸಿರಬೇಕು.

ಆದಾಗ್ಯೂ, ಅಂತಹ ಪ್ರಕರಣಗಳಲ್ಲಿ 30.09.2009 ರ ಒಳಗೆ ಬಂಡವಾಳ ಹೂಡಿಕೆಯ ಮೇಲಿನ ಸಹಾಯಧನಕ್ಕಾಗಿ ಮನವಿ ಸಲ್ಲಿಸಬೇಕು. ಅನಂತರ 2001–06 ರ ಕೈಗಾರಿಕಾ ನೀತಿಯನ್ವಯ ಸೌಲಭ್ಯಗಳಿಗೆ ಮನವಿಯನ್ನು ಪರಿಗಣಿಸಲಾಗುವುದಿಲ್ಲ. ಮೇಲಿನ ಷರತ್ತುಗಳನ್ನು ಪೂರೈಸದಿರುವ ಉದ್ಯಮಗಳು ತನ್ನಿಂತಾನೆ 2006–11 ಕೈಗಾರಿಕಾ ನೀತಿಗೆ ಒಳಪಡುತ್ತದೆ. 2006–11 ರ ಹೊಸ ಕೈಗಾರಿಕಾ ನೀತಿಯು ಹೊಸ ಉದ್ಯಮದ ಸ್ಥಾಪನೆ, ಅಸ್ತಿತ್ವದಲ್ಲಿರುವ ಘಟಕಗಳ ವಿಸ್ತರಣೆ ಮೇಲೆ ವೈವಿಧ್ಯೀಕರಣಕ್ಕಾಗಿ ಹೆಚ್ಚುವರಿ ಹೂಡಿಕೆ ಎಂದು ಪರಿಗಣಿಸಲಾಗುವುದು.

2009–14 ರ ಕೈಗಾರಿಕಾ ನೀತಿಯ ಪ್ರಕಟಣೆಯಾದಾಗ, ಸ್ಥಾಪನಾ ಪ್ರಕ್ರಿಯೆ ನಡೆಯುತ್ತಿರುವ ಘಟಕಗಳು 2006–11ರ ಕೈಗಾರಿಕಾ ನೀತಿಯನ್ವಯ ಉತ್ತೇಜನ ಮತ್ತು ರಿಯಾಯಿತಿಗಳನ್ನು ಪಡೆಯಲು ಅರ್ಹವಾಗಬೇಕಾದರೆ ಹಣಕಾಸು ಸಂಸ್ಥೆಗಳಿಂದ 01.04.2009 ರ ಮೊದಲು ಸಾಲ ಮಂಜೂರಾಗಿರಬೇಕು ಮತ್ತು ಈ ಕೆಳಗಿನ ಷರತ್ತುಗಳನ್ನು ಪೂರೈಸಿರಬೇಕು.

1. ಸಾಲದ ಮೊದಲನೆಯ ಕಂತು 01.04.2009 ರ ಮೊದಲು ವಿತರಣೆಯಾಗಿರಬೇಕು.

2. ಯಂತ್ರ ಸ್ಥಾವರಗಳ ಸರಬರಾಜಿಗೆ ಆರ್ಡರ್ ಸಲ್ಲಿಸಿರಬೇಕು.

3. 30.09.2009 ರ ಮೊದಲು ವಾಣಿಜ್ಯ ಮಟ್ಟದ ಉತ್ಪಾದನೆ ಆರಂಭಿಸಿರಬೇಕು.

ಮೇಲಿನ ಅವಕಾಶವನ್ನು ದಿನಾಂಕ 30.06.2009 ರ ಒಳಗೆ ಕೈಗಾರಿಕೆ ಅಭಿವೃದ್ಧಿ ಆಯುಕ್ತರು ಮತ್ತು ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯ ನಿರ್ದೇಶಕರು, ಬೆಂಗಳೂರು ಅಥವಾ ಸಂಬಂಧಪಟ್ಟ ಜಿಲ್ಲಾ ಕೈಗಾರಿಕಾ ಕೇಂದ್ರಗಳಲ್ಲಿ ಸೂಕ್ತ ಪುರಾವೆಗಳೊಂದಿಗೆ ನೋಂದಣಿ ಮಾಡಿಸಿರಬೇಕು. ಆಯ್ಕೆಯನ್ನು ಒಮ್ಮೆ ಪ್ರಯೋಗಿಸಿದರೆ, ಅದಕ್ಕೆ ಬದ್ಧವಾಗಿರಬೇಕು ಮತ್ತು ಯಾವುದೇ ಕಾರಣಕ್ಕೂ ಹಿಂದಕ್ಕೆ ಪಡೆಯುವ ಹಾಗಿಲ್ಲ. 30.06.2009 ರ ಒಳಗೆ ಆಯ್ಕೆಯನ್ನು ಪ್ರಯೋಗಿಸಿಲ್ಲದಿದ್ದರೆ ತನ್ನಿಂತಾನೇ ಈ ಆದೇಶವು ಅನ್ವಯವಾಗುತ್ತದೆ.

ಎಲ್) 2006–11 ಮತ್ತು 2009–14 ರ ಕೈಗಾರಿಕಾ ನೀತಿಯನ್ವಯ ಅರ್ಹತೆ ಪಡೆದಿರುವ ಉದ್ಯಮಗಳು ವಾಣಿಜ್ಯ ಉತ್ಪಾದನೆ ಪ್ರಾರಂಭವಾದಂದಿನಿಂದ ಆರು ತಿಂಗಳ ಒಳಗಾಗಿ ಸಂಬಂಧಪಟ್ಟ ಜಿಲ್ಲಾ ಕೈಗಾರಿಕಾ ಕೇಂದ್ರಕ್ಕೆ ಸಹಾಯ ಧನಕ್ಕಾಗಿ ಅರ್ಜಿ ಸಲ್ಲಿಸತಕ್ಕದ್ದು. ಇದಕ್ಕೆ ತಪ್ಪಿದಲ್ಲಿ, ಹೂಡಿಕೆ ಸಹಾಯಧನಕ್ಕೆ ಅರ್ಹತೆಯನ್ನು ಕಳೆದುಕೊಳ್ಳುತ್ತವೆ.

ಎಂ) SFC ಆಕ್ಟ್ ನ ಸೆಕ್ಷನ್ 29 ರನ್ವಯ ಹಣಕಾಸು ಸಂಸ್ಥೆಗಳಿಂದ ವಶಪಡಿಸಿಕೊಳ್ಳಲಾದ ಹೊಸ ಅಥವಾ ಹಾಲಿ ಉದ್ಯಮಗಳಿಗೆ ಭೂಮಿ, ಯಂತ್ರ ಸ್ಥಾವರಗಳ ಮೇಲೆ ಹೂಡಲಾದ ಬಂಡವಾಳವು ಉತ್ತೇಜನ ಮತ್ತು ರಿಯಾಯಿತಿಗಳಿಗೆ ಅರ್ಹವಾಗಿರುವುದಿಲ್ಲ.

ಎನ್) ಮಾಹಿತಿ ತಂತ್ರಜ್ಞಾನ / ಜೈವಿಕ ತಂತ್ರಜ್ಞಾನ / ಪ್ರವಾಸೋದ್ಯಮ / ವೈನ್ ಉದ್ಯಮ / ನೀರಾ ಸಂಸ್ಕರಣ ಉದ್ಯಮ / ಮೂಲಭೂತ ಸೌಕರ್ಯ ಅಭಿವೃದ್ಧಿ ಮೇಲೆ ಹೂಡಲಾದ ಬಂಡವಾಳಕ್ಕೆ ಉತ್ತೇಜನ ಮತ್ತು ರಿಯಾಯಿತಿಗಳು ಆಯಾ ಉದ್ಯಮಕ್ಕೆ ಸಂಬಂಧಪಟ್ಟ ಸರ್ಕಾರದ ನೀತಿಯ ಮೇಲೆ ಹೊಂದಿಕೊಂಡಿದೆ.

ಒ) ನಿರ್ದಿಷ್ಟವಾಗಿ ಸೂಚಿಸದ ಹೊರತು, ಒಂದು ಔದ್ಯಮಿಕ ಘಟಕವು ಒಂದೇ ಕೈಗಾರಿಕಾ ನೀತಿಯನ್ವಯ ಉತ್ತೇಜನ ಮತ್ತು ರಿಯಾಯಿತಿಗಳನ್ನು ಪಡೆಯತಕ್ಕದ್ದು.

ಪಿ) ಸಂಬಂಧಪಟ್ಟ ಸಂಸ್ಥೆಗಳು ಹಾಗೂ ಅಧಿಕಾರಿಗಳ ಮಾರ್ಗದರ್ಶನಕ್ಕಾಗಿ ಈ ಕೈಗಾರಿಕಾ ನೀತಿಯನ್ವಯ ಉತ್ತೇಜನ ಮತ್ತು ರಿಯಾಯಿತಿಗಳನ್ನು ಅನುಷ್ಠಾನಗೊಳಿಸುವುದಕ್ಕಾಗಿ ಪ್ರತ್ಯೇಕ ಮಾರ್ಗದರ್ಶಿಕೆಗಳನ್ನು ಸರ್ಕಾರದ ಕಾರ್ಯದರ್ಶಿಗಳು ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ ಇವರ ಅಧ್ಯಕ್ಷತೆಯ ರಾಜ್ಯ ಮಟ್ಟದ ಸಮನ್ವಯ ಸಮಿತಿಯ ಅನುಮೋದನೆ ಪಡೆದು ಪ್ರಕಟಿಸಲಾಗುವುದು. ಸರ್ಕಾರಿ ಆದೇಶಗಳ (ಹಿಂದಿನ ಕೈಗಾರಿಕಾ ನೀತಿಗಳೂ ಸೇರಿದಂತೆ) ಹಾಗೂ ತತ್ಸಂಬದ್ಧ ನಿರ್ಣಯಗಳ ಬಗ್ಗೆ ಈ ರಾಜ್ಯಮಟ್ಟದ ಸಮನ್ವಯ ಸಮಿತಿಯ ವ್ಯಾಖ್ಯಾನ ಅಂತಿಮವಾಗಿದೆ.

## PROCEEDINGS OF THE GOVERNMENT OF KARNATAKA

## COMMERCE & INDUSTRIES SECRETARIAT

**Sub. : Karnataka New Industrial Policy 2009-2014.**

**Read:** 1. G.O. No. CI 167 SPI 2001, Bangalore dtd: 30.06.2001

2. G.O. No. CI 319 SPI 2005, Bangalore dtd: 26.08.2006

**Preamble :**

Karnataka is one of the Industrially forward States of India. The State has a host of large industries ably supported by a strong base of Micro, Small and Medium Sectors. Due to inherent advantages of the State, the industry and trade sectors including service sector are propelling the overall economic development of Karnataka.

Today, Karnataka is one amongst the industrially developed States in the Country. The State has all potential to stand out on the fore front and has been focusing on development of industries, trade & service sector in Karnataka. Due to the progressive policies and proactive measures of the Government and also the contribution of entrepreneurial fraternity and investors, today Karnataka has been recognized as one of the preferred destinations for both investment and to live in.

This fact is evident from the statistics that, during the years 2006-07 and 2007-08 the State High Level Clearance Committee has approved 173 projects with aggregated investment of Rs. 2,50,779 crores which will provide employment opportunities for about 28 lakh persons upon implementation. Further, the State Level Single Window Clearance Committee has cleared 1609 projects with investment potential of Rs. 22,234 crores and employment opportunities for about 10.72 lakh persons.

The State Government enunciated its New Industrial Policy 2006-11 vide G.O. No. CI 319 SPI 2005, Bangalore dated 26.08.2006. This policy laid emphasis on development of infrastructure and human resource in addition to other measures. This policy had its own impact in accelerating the pace of development of industries & trade. The Gross State Domestic Product (GSDP) of Karnataka has registered a growth of 6.9% during 2007-08 against 6.2% during the previous year. The share of industry in GSDP has also increased to 16.65% during 2007-08, when compared to 16.51% during 2006-07.

Today, SME sector does get special attention and support all over the World, even in the developed countries. Realizing this fact, the Central Govt. enacted Micro, Small & Medium Enterprises Development Act, 2006 facilitating the growth of MSME sector in the Country. In line with the philosophy of the MSMED Act, it is imminent for the State to focus more on MSME sector. This Act provides a clear status for enterprises engaged in service activities and a clear cut definitions for medium scale enterprises. It is felt that, these features need to be suitably incorporated in the current industrial policy of the State to provide better edge to the MSME sector of the State.

The Government is committed for implementation of Suvarna Karnataka Development Corridor Programme throughout the length & breadth of the State. This corridor will give added fillip the overall development of the districts covered under the programme. In complement to this corridor four major industrial corridor with 8 lane roads will also be developed. To harness the local natural and human resources sector specific zones will also be established across the State.

Further, the State is endowed with rich natural resources across the State and such resources need to be optimally utilized for the benefit of local people. Value addition to the resources is one of the way for optimizing the wealth available locally. This will also help for uniform spread of industries and economic activities throughout the State and will accelerate the pace of development especially the districts of North Karnataka. Through these measures, the Government would be able to readdress the much talked about issue of regional imbalances in development.

The State also felt the urgency of providing stimulus measures for industries and service sector to combat the ill effects of the financial crisis prevailing globally. The state is committed to initiate certain measures to provide temporary relief to the industry & service sector to overcome the present situation.

Keeping all these facts in view, the State Govt. felt the necessity of bringing out a New Industrial Policy for this period of next five years. The main objectives of this exercise is to make the policy more attractive to the entrepreneurs as well as investors irrespective of the size of investment.

The policy has been drafted through extensive consultation process with industry associations, trade bodies, related Govt. departments and organizations & other stakeholders. The Policy has also been discussed in the Vision Group constituted by the Government. The views and suggestions offered by all these stakeholders have been incorporated suitably in the policy with the objective of making this policy most industry friendly.

In light of the above, a decision has been taken by the Govt. to formulate and adopt a New Industrial Policy for the period 2009-14.

Hence, the following Order :

**Government Order No. CI 233 SPI 2008, Bangalore Dtd : 28th February, 2009**

In the circumstances explained in the preamble, Government is pleased to announce the Karnataka Industrial Policy 2009-14, as detailed in Annexe to this order and supported by following Annexes :

| | | |
|---|---|---|
| Annexe –1 | : | Classification of taluks into Zones for the purpose of administering graded scale of incentives and concessions. |
| Annexe – 2 | : | Package of incentives and concessions for investments |
| Annexe - 3 | : | Service Enterprises eligible for package of Incentives & Concessions. |
| Annexe – 4 | : | Activities not eligible for incentives |
| Annexe – 5 | : | Terms of reference & other conditions for sanction of Incentives and Concessions. |

The salient features of the Karnataka Industrial Policy 2009-14 are as follows :

(i) Envisions to make Karnataka prosperous through development of human & natural resources in a systematic, scientific and sustainable manner.

